## ಪಕ್ಷ: ಗರಿಮುರಿ, ತಾಜಾ ಹಾಗೂ ಜನಪ್ರಿಯವಾಗಿ-ರುವುದರಿಂದ ಪಾರ್ಲೆ ಬಿಸ್ಕಿಟ್‌ಗಳನ್ನು ನಕಲು ಮಾಡುವವರು ಅನೇಕರಿದ್ದಾರೆ.

ಸಾಧ್ಯ : ಒಂದು ಬಿಸ್ಕಿಟನ್ನು ಪಾರ್ಲೆ ಬಿಸ್ಕಿಟನಂತೆ ಕಾಣುವ ಹಾಗೆ ಮಾಡಬಹುದು, ಆದರೆ ಅದಕ್ಕೆ ಪಾರ್ಲೆ ಬಿಸ್ಕಿಟಿನ ರುಚಿ ಕೊಡಲು ಸಾಧ್ಯವಿಲ್ಲ.

ಸಿದ್ಧತೆ : (ಅ) ಹೆಸರಿನ ಪರೀಕ್ಷೆ : ಹೆಸರಿನ ಅಕ್ಷರಗಳನ್ನು ಗಮನಿಸಿರಿ. ಅವು P-A-R-L-E (ಪಾರ್ಲೆ) ಎಂದಿರಬೇಕು, P-E-A-R-L ಅಥವಾ P-E-R-L-E ಎಂದು ಇರಬಾರದು. ಗ್ಲುಕೋದಲ್ಲಿ ಅಕ್ಷರಗಳು G-L-U-C-O ಎಂದು ಇರಬೇಕು, G-L-U-C-O-S-E ಎಂದಲ್ಲ. ಈ ಬಗ್ಗೆ ಖಾತ್ರಿ ಮಾಡಿಕೊಳ್ಳಿರಿ.

ಪಾರ್ಲೆ ಗ್ಲುಕೋ ಬಿಸ್ಕಿಟ್‌ಗಳನ್ನು ಬಿಡಿಯಾಗಿ ಕೊಳ್ಳುವುದಾದರೂ ಬಿಸ್ಕಿಟಿನ ಮೇಲಿರುವ ಅಕ್ಷರಗಳನ್ನು ಪರೀಕ್ಷಿಸಿ ಅವು ಅಪ್ಪಟ ಪಾರ್ಲೆ ಗ್ಲುಕೋ ಎಂದು ಖಾತ್ರಿ ಮಾಡಿಕೊಳ್ಳಿರಿ.

(ಆ) ಪ್ಯಾಕೇಜ್ ಪರೀಕ್ಷೆ : ನಮ್ಮ ವರ್ಣರಂಜಿತ ಪ್ಯಾಕ್‌ನ ಮೇಲೆ ಅಂದವಾದ ಮಗುವಿನ ಚಿತ್ರವನ್ನು ನೋಡಿಕೊಳ್ಳಿರಿ. ಉತ್ತಮಿಕೆಯ ಬಗ್ಗೆ ಅದು ನಿಮಗೆ ಗ್ಯಾರಂಟಿ.

(ಇ) ರುಚಿಯ ಪರೀಕ್ಷೆ : ಬಿಸ್ಕಿಟನ್ನು ತಿಂದು ನೋಡಿರಿ. ಅದು ಗರಿಮುರಿಯಾಗಿ, ತಾಜಾ ಆಗಿ ಇದ್ದರೆ ಅದು ಅಪ್ಪಟ ಪಾರ್ಲೆ ಗ್ಲುಕೋ ಬಿಸ್ಕಿಟ್ ಎಂದು ನೀವು ಖಾತ್ರಿಯಾಗಿರಬಹುದು.




ಇತಿ ಸಿದ್ಧಂ

## ಒಂದಕ್ಕಿಂತ ಒಂದು ರುಚಿಕರ, ಸಂತೃಪ್ತಿಯ ಶಿಖರ

# ದಂತಕೋಟೆಯ ವಿನಾಶ!


































* ಕಾರ್ಬೋಕ್ಸಿಲ್ ಏಸಿಡ್ ಗ್ರೂಪ್‌ನ ಫಾರ್ಮುಲಾ. ಇದು ಹಲ್ಲಿನ ಎನಾಮಲನ್ನು ಆಕ್ರಮಿಸಿ, ನೋಯುವ ಕುಳಿಗಳನ್ನುಂಟುಮಾಡುತ್ತದೆ.

ಹಲ್ಲುಗಳ ದೃಢೀಕರಣಕ್ಕೆ,
ದಂತಕ್ಷಯ ನಿವಾರಣೆಗೆ—ಬಿನಾಕಾ ಫ್ಲೋರೈಡ್.




# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

**ಬಾ**ಲರು ಯಾವಾಗಲೂ ಬಾಲರಲ್ಲ, ಬೆಳೆಯುತ್ತಾ ಬರುವುದು ಬಾಲರ ಸಹಜ ಪ್ರಕೃತಿಯಾಗಿದೆ. ಬೆಳೆಯುತ್ತಾ ಹೇಗೆ ಪ್ರವರ್ಧಮಾನರಾಗಬೇಕೆಂಬುದನ್ನು ನಮ್ಮ ಈ ಮೊದಲಿನ ಪುರಾಣ ಬಾಲರು ತೋರಿಸಿದ್ದಾರೆ. ಬೆಳೆದ ಮೇಲೆ ಯುವಕನಾಗಿ ಪ್ರೇಮಾಭಿಮಾನಗಳನ್ನು ಬಿಗಿ ಹಿಡಿದು ತಂದೆಯ ಸ್ಥಾನಕ್ಕೆ ಹೇಗೆ ಯೋಗ್ಯನಾಗಬೇಕೆಂಬುದನ್ನು ಈ ಸಂಚಿಕೆಯ "ಅವೀಕ್ಷಿತ" ನೆಂಬ ಪುರಾಣಬಾಲ ಕಥೆಯಿಂದ ತಿಳಿಯಬಹುದು.

## ಅಮರವಾಣಿ

ಪುಂಸಾಮುನ್ನತ ಚಿತ್ತಾನಾಂ ದ್ವಯಮೇವ ಸುಖಾವಹಮ್
ಸರ್ವಸಂಗ ನಿವೃತ್ತಿರ್ವಾ ವಿಭೂತಿರ್ವಾ ಸುವಿಸ್ತರಾ

ಉನ್ನತ ಭಾವನೆಗಳಿರುವ ಪುರುಷರಿಗೆ ಸುಖವನ್ನುಂಟುಮಾಡುವಂತಹವು ಎರಡೇ ಎರಡು ಮಾತ್ರ : ಸರ್ವಸಂಗಪರಿತ್ಯಾಗವೋ, ಅಪಾರವಾದ ಐಶ್ವರ್ಯವೋ!

ಸಂಪುಟ : ೬೪ ಜನವರಿ '೮೦ ಸಂಚಿಕೆ : ೧

ಬಿಡಿ ಪ್ರತಿ ರೂ. ೧-೫೦ :: ವಾರ್ಷಿಕ ಚಂದಾ ರೂ. ೧೮-೦೦




**ಎ. ಮದನ್‌ಕುಮಾರ್, ಬರಂಪುರಂ**

ಪ್ರ: ಭಯವೇನಾದರೂ ಉಂಟಾದಾಗ ಎದೆಗುಂಡಿಗೆ ಜೋರಾಗಿ ಹೊಡೆದುಕೊಳ್ಳುವುದಕ್ಕೆ ಕಾರಣವೇನೆಂದು ಹೇಳುವಿರಾ ?

ಉ: ಮನುಷ್ಯ ಶರೀರದಲ್ಲಿ ಮೂತ್ರಪಿಂಡಗಳಿಗೆ ಮೇಲೆ, ಬೆನ್ನು ಹುರಿಗೆ ಎರಡು ಬದಿಗಳಲ್ಲಿ ಎರಡು ಗ್ರಂಥಿಗಳು (glands) ಇರುತ್ತವೆ. ಇವುಗಳನ್ನು "ಎಡ್ರಿನಲೀನ್" ಗ್ರಂಥಿಗಳು ಅನ್ನುತ್ತಾರೆ. ಈ ಗ್ರಂಥಿಗಳಲ್ಲಿ ಮೇಲೊಂದು ಒಳಗೊಂದು ಪೊರೆಗಳಿರುತ್ತವೆ. ಶರೀರದ ಅಗತ್ಯಗಳಿಗೆ ತಕ್ಕಂತೆ ಗ್ರಂಥಿಗಳು ಬೇರೆ ಬೇರೆ ಸ್ರಾವಗಳನ್ನು ಸರಬರಾಯಿ ಮಾಡುತ್ತವೆ. ಯಾವ ಕಾರಣದಿಂದಾದರೂ ಇಂತಹ ಸ್ರಾವಗಳಲ್ಲಿ ಹೆಚ್ಚು ಕಡಿಮೆಯಾದರೆ ಶರೀರದ ಆರೋಗ್ಯ ಕೆಡುತ್ತದೆ. ಆಕಸ್ಮಿಕವಾಗಿ ಮನುಷ್ಯನಿಗೆ ಭಯೋದ್ರೇಕವಾದಲ್ಲಿ ಎಡ್ರಿನಲೀನ್ ಗ್ರಂಥಿಗೆ ಸಂಬಂಧಿಸಿದ ಒಳಪೊರೆಯಿಂದ "ಎಪಿನೆಫ್ರೀನ್" ಎಂಬ ಪದಾರ್ಥವು ರಕ್ತದೊಳಗೆ ಸ್ರವಿಸುತ್ತದೆ. ಇದರ ಫಲಿತವಾಗಿ ಚರ್ಮವು ಕಂದಿಹೋಗುವುದೇ ಮೊದಲಾದ ಲಕ್ಷಣಗಳೂ, ಗುಂಡಿಗೆ ವೇಗವಾಗಿ ಹೊಡೆದುಕೊಳ್ಳುವುದೂ ಉಂಟಾಗುತ್ತದೆ.

**ವಿ. ಕೇಶವನಾರಾಯಣ, ವ್ಯಾಸರಪಾಡಿ**

ಪ್ರ: ಸೂರ್ಯನ ವಿವಿಧ ದಿಶೆಗಳಲ್ಲಿ ಗ್ರಹಗಳಿರುತ್ತವೆ. ಆದರೆ ಎಲ್ಲಾ ಗ್ರಹಗಳೂ ಸೂರ್ಯನ ಒಂದೇ ದಿಶೆಯಲ್ಲಿದ್ದರೆ ಉಂಟಾಗುವ ಫಲಿತ ಏನಾಗಿದ್ದೀತು ?

ಉ: ಕೆಲವು ವರ್ಷಗಳ ಹಿಂದೆ ಅಷ್ಟಗ್ರಹ ಕೂಟ ಬರಲಿರುವುದೆಂದೂ, ಆಗ ಸಮುದ್ರಗಳೆಲ್ಲ ಉಕ್ಕಿ ಮಹಾ ನಗರಗಳು ಕೂಡಾ ಮಣ್ಣಿನ ದಿಣ್ಣೆಗಳಾಗುತ್ತವೆಂದೂ ಅನೇಕರು ಭವಿಷ್ಯ ಹೇಳಿದರು. ಹಾಗೇನೂ ಆಗಲಿಲ್ಲ. ಭವಿಷ್ಯ ಹೇಳಿದವರೂ ಊರುಬಿಟ್ಟು ಓಡಿದವರೂ ನಗೆಗೀಡಾದರು. ಭೂಮಿಯಲ್ಲಿ ಪ್ರಕೃತಿ ವೈಪರೀತ್ಯಗಳು ಅಂದರೆ, ಭರತಗಳೂ, ಭೂಕಂಪಗಳೂ, ಅಸಾಧಾರಣವಾದ ಉಲ್ಕಾಪಾತಗಳೂ, ಅಗ್ನಿ ಪರ್ವತ ಸಿಡಿತಗಳೂ ಉಂಟಾಗುತ್ತಲೇ ಇವೆ. ಆದರೆ ಅವುಗಳಿಗೂ ಗ್ರಹಗತಿಗಳಿಗೂ ಸಂಬಂಧವೇನೆಂಬುದನ್ನು ಯಾರೂ ಹೇಳುವುದಿಲ್ಲ. ಸ್ವಲ್ಪ ಹೆಚ್ಚು ಕಡಿಮೆ ೧೮೦ ವರ್ಷಗಳಿಗೆ ಒಂದುಸಾರಿ ಗ್ರಹಗಳೆಲ್ಲಾ ಸೂರ್ಯನಿಗೆ ಒಂದೇ ಬದಿಯಲ್ಲಿ ಕೂಡಿ ನಿಲ್ಲುತ್ತವೆ. ಆದುದರಿಂದ ಚರಿತ್ರೆಯ ಕಾಲದಲ್ಲಿ ಕೂಡಾ ನೀವು ಹೇಳುವ ಹಾಗೇ ನಡೆದಿರಬೇಕು. ಆದರಿಂದ ಏನು ನಡೆದಿದೆ ಎಂಬುದನ್ನು ಚರಿತ್ರೆಯಲ್ಲಿ ನೋಡಿ ತಿಳಿದುಕೊಳ್ಳಬಹುದು! ಬಹುಶಃ ಹಾಗೇನೂ ನಡೆದಂತಿಲ್ಲ. ಏನಾದರೂ ನಡೆದಿದ್ದರೆ ಶಾಸ್ತ್ರಜ್ಞರು ಯಾವಾಗಲೋ ಕಂಡುಹಿಡಿದು ಹೇಳುತ್ತಿದ್ದರೆಂದು ನಾವು ಊಹಿಸಬಹುದು.





ತನ್ನ ಬಂಧುಮಿತ್ರ ಪರಿವಾರವೆಲ್ಲಾ ಸತ್ತು ಹೋದುದನ್ನು ನೆನೆದು ಆ ಮುದಿಕೋತಿ ತುಂಬಾ ದುಃಖಿಸುತ್ತ, "ಆ ದಿನ ನಾನು ಹೇಳಿದ ಮಾತನ್ನು ಕೇಳದೆ ಕೋತಿಗಳೆಲ್ಲಾ ಈ ದುರ್ಗತಿಯನ್ನು ಹೊಂದಿದುವು. ಕರುಣೆಯೇ ಇಲ್ಲದ ಮಹಾ ದುಷ್ಟನಾದ ಆ ರಾಜನ ಮೇಲೆ ನಾನು ಹೇಗೆ ಹಗೆ ತೀರಿಸಿಕೊಳ್ಳಲಿ ? ತನ್ನ ವಂಶಕ್ಕೆ ನಡೆದ ಅನ್ಯಾಯ ವನ್ನು ಪಿರಿಕಿತನದಿಂದಲೋ, ಸ್ವಾರ್ಥಚಿಂತನೆ ಯಿಂದಲೋ ಸಹಿಸಿಕೊಂಡಿರುವವನು ಪರಮ ಹೀನ ನೆಂದು ಹೇಳುತ್ತಾರೆ. ನನ್ನ ವಂಶವನ್ನು ಸರ್ವನಾಶ ಮಾಡಿದುದಕ್ಕೆ ನಾನು ಹೇಗೆ ತಾನೇ ಪ್ರತೀಕಾರ ಮಾಡಲಿ ? " ಎಂದುಕೊಂಡಿತು.

ಹಗೆ ತೀರಿಸಿಕೊಳ್ಳುವ ಉಪಾಯವನ್ನು ಆಲೋಚನೆ ಮಾಡುತ್ತ ಆ ಮುದಿಕೋತಿ ಅಡವಿ ಯೊಳಗೆಲ್ಲಾ ತಿರುಗಾಡಿತು. ಬಿಸಿಲಿನ ಬೇಗೆಯಿಂದ ಕೋತಿ ನೀರನ್ನು ಹುಡುಕುತ್ತಾ ಒಂದು ತಾಮರೆ ಕೊಳದ ಸಮೀಪಕ್ಕೆ ಬಂದಿತು. ಆ ಪ್ರದೇಶ ದಲ್ಲಿ ಕವಿದಿರುವ ನಿಶ್ಶಬ್ದವು ತುಂಬ ಭಯವ ನ್ನುಂಟುಮಾಡುವಂತಿತ್ತು. ಅದೇನೋ ಅಪಾಯ ಸೂಚನೆಯಂತಿದ್ದಿತು. ಅದು ಜಾಗರೂಕತೆಯಿಂದ ಸುತ್ತಲೂ ನೋಡುತ್ತಿರಲು, ಒಂದು ವಿಷಯವು ಗೊತ್ತಾಯಿತು. ಅಲ್ಲಿ ಪ್ರಾಣಿಗಳು ನೀರಿನ ಕಡೆಗೆ ಹೋದ ಹಜ್ಜೆಯ ಗುರುತುಗಳಿವೆಯೇ ಹೊರತು, ಹಿಂದಿರುಗಿ ಹೋದ ಗುರುತುಗಳು ಇಲ್ಲ.

"ಈ ಜಲಾಶಯದ ಮಡುವಿನೊಳಗೆ ಮೊಸಳೆ ಗಳಿರಬಹುದು. ನೀರು ಕುಡಿಯಲು ಬರುವ ಪ್ರಾಣಿ ಗಳನ್ನು ಅವು ಹಿಡಿದು ತಿನ್ನುತ್ತವೆಂದು ಕಾಣುತ್ತದೆ. ಆದುದರಿಂದ ನಾನು ಈ ಮಡುವಿನ ನೀರಿಗೆ ಕಾಲಿಡದೆ ತಾಮರೆಯ ದಂಟಿನಿಂದಲೇ ನೀರನ್ನು ಹೀರಿಕೊಳ್ಳುತ್ತೇನೆ " ಎಂದುಕೊಂಡು ಮುದಿಕೋತಿ ನೀರಿನ ಮಟ್ಟಕ್ಕೆ ಸರಿಯಾದ ಮೆಟ್ಟಲಿನವರೆಗೆ ಇಳಿದು, ಕೋಲಿನಿಂದ ತಾಮರೆಯ ದಂಟನ್ನು ಮೇಲಕ್ಕೆತ್ತಿ ಎಟಕರಿಸಿ ಕಿತ್ತು, ಆದರ ತೂಬಿನ ಮೂಲಕ ನೀರನ್ನು ಹೀರಿಕೊಳ್ಳ ತೊಡಗಿತು.

ಆ ಸಮಯದಲ್ಲಿ ಒಬ್ಬಳು ಯಕ್ಷಿಣಿ ನೀರಿ ನೊಳಗಿನಿಂದ ತಲೆ ಎತ್ತಿದಳು. ಅವಳ ಕಂಠದಲ್ಲಿ



ಅತ್ಯದ್ಭುತ ಕಾಂತಿಯಿಂದ ಬೆಳಗುವ ವಜ್ರಗಳ ಹಾರವಿದ್ದಿತು. ಅವಳು ಕೋತಿಯನ್ನು ನೋಡಿ, "ಭಲೇ ಬುದ್ಧಿವಂತ ನೀನು ! ಈ ಮಡುವಿನ ನೀರಿಗೆ ಕಾಲಿಟ್ಟವರು ನನಗೆ ಆಹಾರವಾಗಲೇ ಬೇಕು. ನೀನು ತುಂಬಾ ಬುದ್ಧಿವಂತನಾದುದರಿಂದ ನೀರಿಗೆ ಕಾಲಿಡದೆ ವಿಚಿತ್ರ ಪದ್ಧತಿಯಿಂದ ನೀರು ಕುಡಿದುಬಿಟ್ಟೆಯಲ್ಲ ! ಮೆಚ್ಚಿದೆನು. ಏನಾದರೂ ಕೇಳು, ಕೊಡುತ್ತೇನೆ" ಎಂದಳು.

ಕೋತಿಯ ಮನಸ್ಸಿನಲ್ಲಿ ಬ್ರಹ್ಮಾಂಡದಂತಹ ಆಲೋಚನೆಯೊಂದು ಮಿಂಚಿತು. "ನೀನು ಒಂದೇ ಸಾರಿ ಎಷ್ಟು ಪ್ರಾಣಿಗಳನ್ನು ತಿನ್ನಬಲ್ಲೆಯಮ್ಮಾ ?" ಎಂದು ಕೇಳಿತು.

"ನೀರಿನಲ್ಲಿ ಕಾಲೊಂದು ಇಟ್ಟುಬಿಟ್ಟರೆ ಸಾಕು. ಎಷ್ಟು ಲಕ್ಷ ಪ್ರಾಣಿಗಳನ್ನಾದರೂ ತಿಂದುಬಿಡುತ್ತೇನೆ. ನೀರಿನಿಂದ ಹೊರಗೆ ಬಂದರೆ ಮಾತ್ರ ನಾನು ಸೊರಕಲು ನರಿಗಿಂತಲೂ ಕಡೆ !" ಎಂದಳು ಯಕ್ಷಿಣಿ.

"ನನಗೆ ಚಂದ್ರನೆಂಬ ರಾಜನೂ, ಅವನ ಬಂಧು ಮಿತ್ರ ಪರಿವಾರದವರೂ ದೊಡ್ಡ ಶತ್ರುಗಳಾಗಿದ್ದಾರೆ. ನಿನ್ನ ಕಂಠದಲ್ಲಿರುವ ಹಾರವನ್ನು ನನಗೆ ಕೊಟ್ಟರೆ ಸಾಕು, ನಾನು ಆ ರಾಜನಲ್ಲಿಯೂ, ಅವನ ಕಡೆಯುವರಲ್ಲಿಯೂ ದುರಾಶೆಯನ್ನು ಎಬ್ಬಿಸಿ, ಇಂತಹ ಹಾರಗಳಿಗಾಗಿ ಈ ಮಡುವಿಗೆ ಇಳಿಯುವ ಹಾಗೆ ಮಾಡುತ್ತೇನೆ. ನಿನಗೆ ಬೇಕಾದಷ್ಟು ಆಹಾರವಾಯಿತು" ಎಂದಿತು ಕೋತಿ.

ಯಕ್ಷಿಣಿ ಆ ಮಾತನ್ನು ಕೇಳಿ ಸಂತೋಷದಿಂದ, ಹಾರವನ್ನು ತೆಗೆದು ಕೋತಿಗೆ ಕೊಟ್ಟು, "ಮಿತ್ರಾ, ಹೇಗಾದರೂ ಅವರೆಲ್ಲರನ್ನೂ ಆದಷ್ಟು ಬೇಗ ಇಲ್ಲಿಗೆ ಕರೆದುಕೊಂಡು ಬಾ. ಈ ಕೆಲಸಮಾಡಿ ನಮ್ಮ ಸ್ನೇಹವನ್ನು ಶಾಶ್ವತ ಮಾಡಿಬಿಡು" ಎಂದಳು.

ಮುದಿಕೋತಿ ವಜ್ರಗಳ ಹಾರವನ್ನು ತೆಗೆದುಕೊಂಡು ರಾಜ ಪ್ರಾಂಗಣಕ್ಕೆ ಹೋಗಿ, ಅದನ್ನು ತನ್ನ ಕೊರಳಲ್ಲಿ ಧರಿಸಿ, ಎಲ್ಲರಿಗೂ ಕಾಣುವ ಹಾಗೆ ಒಂದು ಮರದಿಂದ ಇನ್ನೊಂದು ಮರಕ್ಕೆ ಹಾರತೊಡಗಿತು. ರಾಜೋದ್ಯೋಗಿಗಳೂ, ಭಟರೂ ಅದನ್ನು ನೋಡಿ, "ಓ ಓ ! ಕೋತಿರಾಜಾ ! ಇಷ್ಟು ದಿನ ಎತ್ತ ಹೋದೆಯೋ ? ನಿನಗೆ ಈ ಹಾರ ಎಲ್ಲಿ ಸಿಕ್ಕಿತು ? ಬಹಳ ಅಮೋಘವಾಗಿದೆ!" ಎಂದರು.

ಅದಕ್ಕೆ ಕೋತಿ, "ಇಂಥಾದ್ದು ಬೇಕಾದಷ್ಟಿದೆ. ಇಲ್ಲಿಗೆ ಸಮೀಪದ ಕಾಡಿನಲ್ಲಿ ಒಂದು ರಹಸ್ಯ ಪ್ರದೇಶವಿದೆ. ಕುಬೇರನು ತನ್ನ ನಿಧಿಗಳನ್ನು ಇಡಲಿಕ್ಕೆ ಅಲ್ಲಿ ಒಂದು ತಾಮರೆ ಕೊಳವನ್ನು ನಿರ್ಮಿಸಿದ್ದಾನೆ. ಆದಿತ್ಯವಾರ ಬೆಳಿಗ್ಗೆ ಯಾರು ಹೋಗಿ ಅದರಲ್ಲಿ ಸ್ನಾನಮಾಡಿದರೂ ಅವರನ್ನು ಕುಬೇರನು ತನ್ನ ಅತಿಥಿಗಳಾಗಿ ಭಾವಿಸಿ, ಸ್ನಾನ ಮುಗಿಸಿ ಮೇಲೆ ಬರುವಾಗ, ಇಂತಹ ವಜ್ರಗಳ ಹಾರವನ್ನು ಕೊರಳಿಗೆ ಹಾಕಿ ಕಳುಹಿಸುವ ಪದ್ಧತಿ ಇಟ್ಟುಕೊಂಡಿದ್ದಾನೆ" ಎಂದು ಹೇಳಿತು.

ಈ ಸಮಾಚಾರ ರಾಜನ ಕಿವಿಗೆ ಮುಟ್ಟಿತು. ಅವನು ಕೂಡಲೇ ಆ ಮುದಿಕೋತಿಯನ್ನು ತನ್ನ ಬಳಿಗೆ ಕರೆಯಿಸಿ, "ಕೋತಿರಾಜಾ, ನೀನು ಹೇಳಿದ ಮಾತು ನಿಜವೇ ?" ಎಂದು ಕೇಳಿದನು.

"ಮಹಾರಾಜಾ, ನನ್ನ ಕೊರಳಲ್ಲಿರುವ ಹಾರವನ್ನು ನೋಡಿದಿರಷ್ಟೆ ? ಇಂತಹ ಹಾರಗಳು ನಿಮಗೂ ಬೇಕಾದರೆ ನನ್ನ ಹಿಂದೆ ಕೆಲವರನ್ನು ಕಳುಹಿಸಿರಿ. ಆ ತಾವುರೆ ಕೊಳವನ್ನು ತೋರಿಸುತ್ತೇನೆ" ಎಂದಿತು ಕೋತಿ.

ರಾಜನಿಗೆ ದುರಾಶೆಯುಂಟಾಯಿತು. ಅವನು ಕೋತಿಯೊಂದಿಗೆ, "ಯಾರನ್ನೋ ಕಳುಹಿಸುವುದು ಏತಕ್ಕೆ ? ನಾನೇ ನನ್ನ ಬಂಧುಮಿತ್ರ ಪರಿವಾರ ದೊಂದಿಗೆ, ಬರುವ ಆದಿತ್ಯವಾರದಿನ ಆ ತಾವುರೆ ಕೊಳಕ್ಕೆ ಬರುತ್ತೇನೆ. ಅಷ್ಟು ಬೇಗದಲ್ಲಿ ಕುಬೇರನು ನಮಗೆ ಅಷ್ಟು ಮಂದಿಗೂ ವಜ್ರಗಳ ಹಾರ ಕೊಡುವನೇನು ?" ಎಂದನು.

"ಕುಬೇರನಿಗೆ ಎಷ್ಟು ಮಂದಿಯಾದರೂ, ಯಾವ ದಿನ ಹೋದರೂ ಒಂದೇ. ಸಮುದ್ರ ತೀರದ ಲ್ಲಿರುವ ಮರಳಿನ ರಾಶಿಯ ಹಾಗೆ ಅವನ ಮನೆ ಯಲ್ಲಿ ವಜ್ರಾದಿ ರತ್ನಗಳ ರಾಶಿಗಳೇ ಇವೆ ಗೊತ್ತಾ ?" ಎಂದಿತು ಕೋತಿ.

ಆದಿತ್ಯವಾರ ಬಂತು. ಇನ್ನೂ ಬೆಳಕು ಹರಿಯುವ ಮೊದಲೇ, ರಾಜನೂ, ರಾಣಿಯರೂ, ರಾಜೋ ದ್ಯೋಗಿಗಳೂ, ಆಸ್ಥಾನದ ಪಶುವೈದ್ಯನೂ, ರಾಜನ ದಾಯಾದಿಗಳೂ, ಪುರಪ್ರಮುಖರೂ ಅರಣ್ಯಕ್ಕೆ ಹೊರಟರು. ಮುದಿಕೋತಿ ಮಹಾರಾಜನ ಮಡಿಲಲ್ಲೇ ಕುಳಿತು ಪ್ರಯಾಣ ಮಾಡಿತು. ರಾಜನು ಪಲ್ಲಕಿಯಲ್ಲಿ ಪ್ರಯಾಣಮಾಡಿದನು.

ದುರಾಶಾದೇವಿಯ ಪ್ರಭಾವವೇ ಅಂತಹುದು. ಅವಳ ಪ್ರೇರಣೆಯಿಂದ ಧನವಂತರು ಸಹಾ ಕೆಟ್ಟ ಕೆಟ್ಟ ಕೆಲಸಗಳನ್ನು ಮಾಡುತ್ತಾರೆ. ದಾಟಲಾಗದಂಥ




ಮರುಭೂಮಿಯನ್ನು ಪ್ರವೇಶಿಸಿ ಹತರಾಗುತ್ತಾರೆ. ಆಕೆಯ ಪ್ರತಾಪದಿಂದ ನೂರು ಬಂಗಾರದ ನಾಣ್ಯಗಳಿರುವವನು ಸಾವಿರಬೇಕೆನ್ನುತ್ತಾನೆ. ಸಾವಿರ ವಿರುವವನಿಗೆ ಲಕ್ಷವಾಗಬೇಕೆಂಬ ಆಸೆ. ಲಕ್ಷಗಳಿರು ವವನಿಗೆ ರಾಜ್ಯವೇ ಬೇಕೆನಿಸುತ್ತದೆ. ರಾಜ್ಯಗಳ ಅಧಿಪತಿಯಾದರೆ ಪ್ರಪಂಚಾಧಿಪತ್ಯ ಬೇಕೆನ್ನುತ್ತಾನೆ. ಅಷ್ಟೆಲ್ಲಾ ಇದ್ದವನು ಸ್ವರ್ಗವು ಸಿಗಬೇಕೆನ್ನುತ್ತಾನೆ. ವಾರ್ಧಕ್ಯ ಬಂದಾಗ ಕೂದಲೆಲ್ಲ ನೆರೆತು ಹಣ್ಣಾಗು ತ್ತದೆ. ಹಲ್ಲುಗಳು ಉದುರುತ್ತವೆ, ಕಣ್ಣುಗಳು ಮಂಜಾಗುತ್ತವೆ, ಕಿವಿಗಳು ಕೆಪ್ಪಾಗುತ್ತವೆ. ಆದರೆ ದುರಾಶೆಗೆ ಮಾತ್ರ ಯೌವನವೇ !

ಅರಣ್ಯದಲ್ಲಿರುವ ತಾವುರೆ ಕೊಳದ ಹತ್ತಿರ ಎಲ್ಲರೂ ಸೇರಿಕೊಂಡ ಮೇಲೆ ಕೋತಿ ರಾಜ ನೊಂದಿಗೆ, "ಮೂಡು ದಿಕ್ಕಿನಲ್ಲಿ ಸೂರ್ಯಬಿಂಬವು ದಿಕ್ಚಕ್ರದ ಮೇಲೆ ಅರ್ಧ ಏಳುವ ಹೊತ್ತಿಗೆ ಎಲ್ಲರೂ ಮಡುವನ್ನು ಪ್ರವೇಶಿಸಲು ಸಿದ್ಧರಾಗಿರಬೇಕು.

ಅದೇ ಸರಿಯಾದ ಮುಹೂರ್ತ. ಎಲ್ಲರೂ ಒಂದೇಸಾರಿ ನೀರಿನೊಳಗೆ ಇಳಿಯಬೇಕು. ಅವರು ಹಿಂದಿರುಗಿ ಬಂದ ಮೇಲೆ, ನೀವೂ ನಾನೂ ಇಳಿಯೋಣ. ನಾನು ನಿಮ್ಮನ್ನು ಒಂದು ರಹಸ್ಯ ಪ್ರದೇಶಕ್ಕೆ ಕರೆದುಕೊಂಡುಹೋಗಿ ಕುಬೇರನಿಂದ ಅನೇಕ ವಿಧದ ಪ್ರತ್ಯೇಕ ಶ್ರೇಷ್ಠತೆಗಳಿರುವ ಹಾರ ಗಳನ್ನು ಕೊಡಿಸುತ್ತೇನೆ" ಎಂದು ಕೋತಿ ರಾಜ ನೊಂದಿಗೆ ಹೇಳಿತು. ರಾಜನು ಅದಕ್ಕೆ ಸಂತೋಷ ವಾಗಿ ಒಪ್ಪಿಕೊಂಡನು.

ಸೂರ್ಯನು ಅರ್ಧಭಾಗ ಉದಯಿಸುವ ಹೊತ್ತಿಗೆ, ರಾಜ ಮತ್ತು ಕೋತಿಯರ ಹೊರತು ಎಲ್ಲರೂ ಉತ್ಸಾಹದಿಂದ ಒಬ್ಬರನ್ನೊಬ್ಬರು ದೂಡಿಕೊಳ್ಳುತ್ತ, ನೀರಿನೊಳಗಿಳಿದು ಒಮ್ಮೆಗೇ ಮುಳುಗಿಹೋದರು. ಅಷ್ಟು ಮಂದಿಯನ್ನು ನುಂಗಿದ ಆ ನೀರು ಪ್ರಶಾಂತವಾಗಿತ್ತು. ಯಾರೂ ತಲೆಯೆತ್ತಿ ಮೇಲೇಳದಿರುವುದನ್ನು ನೋಡಿ ರಾಜನು ಕೋತಿಯೊಂದಿಗೆ, "ಇವರೆಲ್ಲಾ ಎಲ್ಲಿಗೆ ಹೋದರು ? ಇನ್ನೂ ಏಳದಿರುವರಲ್ಲಾ ? " ಎಂದು ಕೇಳಿದನು.

"ಕುಬೇರನ ದಿವಾಣದಲ್ಲಿದ್ದಾರೆ" ಎನ್ನುತ್ತಾ ಕೋತಿ ಬೇಗನೇ ಪಕ್ಕದಲ್ಲಿದ್ದ ಆಲದ ಮರದ ಮೇಲೇರಿ, "ದುಷ್ಟನಾದ ಎಲೈ ರಾಜನೇ ! ನಿನ್ನ ಕಡೆಯುವರೆಲ್ಲರನ್ನೂ ಈ ಮಡುವಿನಲ್ಲಿರುವ ಯಕ್ಷಿಣಿ ತಿಂದುಬಿಟ್ಟಳು. ನಿನ್ನ ಕುದುರೆಗಳ ಗಾಯವನ್ನು ಗುಣಪಡಿಸಲಿಕ್ಕಾಗಿ ನೀನು ನನ್ನವರನ್ನೆಲ್ಲಾ ನಿರ್ದಯ ನಾಗಿ ಕೊಲ್ಲಿಸಿರುವಿ. ಈಗ ನನ್ನ ಸರದಿ. ನಾನು ನಿನ್ನವರೆಲ್ಲಾ ಜಲಯಕ್ಷಿಣಿಯ ಹೊಟ್ಟೆಗೆ ಕಳುಹಿಸಿ ನನ್ನ ಹೊಟ್ಟೆಯ ಉರಿಯನ್ನು ತಣಿಸಿಕೊಂಡಿದ್ದೇನೆ. ನನ್ನ ಹಗೆ ತೀರಿತು. ನೀನು ರಾಜನಾದುದರಿಂದಲೇ ನೀನೊಬ್ಬ ಬದುಕಿರಲು ಬಿಟ್ಟಿದ್ದೇನೆ. ಬದುಕಿದಷ್ಟು ದಿನವೂ ಈ ವೇದನೆಯನ್ನು ಅನುಭವಿಸಿಕೊಂಡಿರು. ಪೆಟ್ಟಿಗೆ ಪೆಟ್ಟು. ಹತ್ಯೆಗೆ ಹತ್ಯೆ ! ಇದೇ ನಮ್ಮ ಕೋತಿಗಳ ನಿಯಮ. ಮನುಷ್ಯರನ್ನು ಅನುಕರಿಸು ವವರು ನಾವು. ನೀನು ನನ್ನ ವಂಶವನ್ನು ನಿರ್ಮೂಲಿ ಸಿದರೆ ನಾನು ನಿನ್ನ ವಂಶವನ್ನು ನಿರ್ಮೂಲ ಮಾಡಿದೆ" ಎಂದು ಹೇಳಿತು.

ರಾಜನು ಈ ಮಾತುಗಳನ್ನು ಕೇಳಿ ದುಃಖಾತಿ ರೇಕದಿಂದ ನಡುಗುತ್ತ, ಬಾಯಿಬಿಟ್ಟು ಅಳುತ್ತ, ಅಲ್ಲಿಂದ ಹಿಂದಿರುಗಿಹೋದನು. ರಾಜನು ಹೊರಟು ಹೋದ ಮೇಲೆ ಯಕ್ಷಿಣಿ ಮಡುವಿನಿಂದ ಮೇಲೆದ್ದು ಕೋತಿಯೊಂದಿಗೆ, "ಮಿತ್ರಾ, ಕೋತಿರಾಜಾ ! ಒಳ್ಳೇ ಕೆಲಸ ಮಾಡಿದಿ. ನಿನ್ನ ಶತ್ರುಗಳನ್ನೆಲ್ಲಾ ಹತಮಾಡಿದಿ ! ವಜ್ರಗಳ ಹಾರವನ್ನೂ, ಮಿತ್ರ ನನ್ನೂ ಸಂಪಾದಿಸಿಕೊಂಡಿ !" ಎಂದು ಧನ್ಯವಾದ ಹೇಳಿತು. ಕೋತಿಗೆ ಸಂತೋಷವಾಯಿತು.





# ಕರಡಿಕೆಂಗಣ್ಣ

೧೮

[ಮಾಯಾಮರ್ಕಟನು ಜಿತಕೇತು ರಾಜನಿಗೆ ನಗರಕ್ಕೆ ಅಪಾಯ ಬರಲಿದೆ ಎಂದು ಹೇಳಿ ಎಚ್ಚರಿಸಿದನು. ಆ ಶತ್ರುಗಳಲ್ಲಿ ರಾಕ್ಷಸನೊಬ್ಬನಿರುವನೆಂದು ಕೇಳಿ, ರಾಜನು ಮಾಯಾಮರ್ಕಟನನ್ನೇ ಪ್ರಧಾನ ಮಂತ್ರಿಯನ್ನಾಗಿ ಮಾಡಿದನು. ಅದನ್ನು ನೋಡಿ ಮಂತ್ರಿ ಜೀವಗುಪ್ತನು ಮರ್ಕಟನ ಮೇಲೆ ಕತ್ತಿಯೆತ್ತಲು, ಮರ್ಕಟನು ಆ ಕತ್ತಿಯನ್ನು ಎಳೆದುಕೊಂಡು ತನ್ನ ಕತ್ತಿಯನ್ನು ಜೀವಗುಪ್ತನ ಮೇಲೆ ಎತ್ತಿದನು.]

ಮಾಯಾಮರ್ಕಟನ ಬಾಲದ ತುದಿಯಲ್ಲಿಯೂ, ಕೈಯಲ್ಲಿಯೂ ಎತ್ತಿ ಹಿಡಿಯಲ್ಪಟ್ಟ ಬಿಚ್ಚುಗತ್ತಿಗಳನ್ನು ನೋಡಿ, ಸಭೆಯೊಳಗೆ ಹಾಹಾಕಾರವೆದ್ದಿತು. ಬಹುದೊಡ್ಡ ಒಳರಗಳೆಯಾಗುವುದೆಂದು ಅಂಜಿದ ಜಿತಕೇತು ರಾಜನು ಅವಸರದಿಂದ ಬಂದು ಮರ್ಕಟನ ಕೈಯನ್ನು ಹಿಡಿದುಕೊಂಡು, "ಮರ್ಕಟಾಮಾತ್ಯಾ! ಅವಸರಪಡಬೇಡ. ಸಭಾಭವನದಲ್ಲಿ ನೆತ್ತರು ಚಿಮ್ಮಿದರೆ ರಾಜ್ಯಕ್ಕೇ ಕೆಡುಕಾಗುತ್ತದೆ. ಅದೂ ಅಲ್ಲದೆ ನಾನು ಈ ಜೀವಗುಪ್ತನಿಗೆ ಶಿರಚ್ಛೇದನ ಶಿಕ್ಷೆ ವಿಧಿಸಿದ್ದೇನೆ. ಅದನ್ನು ಅಮಲು ಪಡಿಸಬೇಕಾದವನು ಶಿರೀಷವನದ ಕಟುಕನಾಯಕ. ಬೇರೆ ಯಾರಿಂದಾದರೂ ಅದು ಅಮಲಾದರೆ ಕೊಲೆ ಪಾತಕವೆನಿಸಿ ಬೇಡದ ಸಿಕ್ಕಾಟ ಬರುತ್ತೆ." ಎಂದನು.

"ಒಳ್ಳೆಯದು ರಾಜಾ. ನಿನ್ನ ಮಾತಿಗೆ ಗೌರವ ಕೊಡಬೇಕಾದ್ದು ನ್ಯಾಯವೇ." ಎಂದು ಮರ್ಕಟನು ತನ್ನ ಕತ್ತಿಯನ್ನು ಒರೆಯೊಳಗೆ ಇಟ್ಟುಕೊಂಡು, ಜೀವಗುಪ್ತನನ್ನು ನೋಡಿ, "ಎಲೋ, ಹಳೆಯ ಅಮಾತ್ಯಾ! ಸದ್ಯಕ್ಕೆ ಬದುಕಿದೆ. ಓಡಿಹೋಗು. ಈ ಕೂಡಲೇ ರಾಜ್ಯವನ್ನು ಬಿಟ್ಟು ಹೋಗಿಬಿಡು. ನನ್ನ ಕಣ್ಣಿಗೆ ಎಂದೂ ಬೀಳಬೇಡ" ಎಂದನು ಕಣ್ಣು ತಿರುಗಿಸುತ್ತ.



ಆಗ ಸಾಮಂತ ರಾಜನಾದ ಸೂರ್ಯಭೂಪತಿ ಜಿತಕೇತು ರಾಜನಿಗೆ ನಮಸ್ಕಾರಮಾಡಿ, "ಮಹಾ ರಾಜರೇ! ನನ್ನ ಹೆಸರು ಸೂರ್ಯಭೂಪತಿ. ಸದ್ಯಕ್ಕೆ ಈ ಜೀವಗುಪ್ತನನ್ನು ಕ್ಷಮಿಸಿಬಿಟ್ಟುಬಿಡುವುದು ಒಳ್ಳೆಯದು. ಈಗ ಅವಸರದಿಂದ ಮಾಡಬೇಕಾದುದು ನಗರ ರಕ್ಷಣೆಯ ವಿಷಯ. ಏಕೆಂದರೆ, ನಿಮ್ಮ ನಗರದ ಮೇಲೆ ದಾಳಿ ಬರುವವರಲ್ಲಿ ಉದಯಗಿರಿ ರಾಜನಾದ ದುರ್ಮುಖನೂ ಇದ್ದಾನೆ. ಆದುದರಿಂದ ಮೊದಲು ನಗರ ರಕ್ಷಣೆಗೆ ತಕ್ಕ ಏರ್ಪಾಡು ಮಾಡಿಸುವುದು ಒಳ್ಳೆಯದು" ಎಂದನು.

ದುರ್ಮುಖರಾಜನ ಹೆಸರು ಕೇಳುತ್ತಲೇ ಜಿತ ಕೇತು ರಾಜನು ಮೆಟ್ಟಿಬಿದ್ದವನಂತೆ, ನಗರ ದ್ವಾರದ ಕಾವಲು ಭಟರ ನಾಯಕನನ್ನು ನೋಡಿ, "ಎಲೋ, ನೀನು ಬೇಗನೇ ಹೋಗಿ ನಗರ ದ್ವಾರವನ್ನು ಮುಚ್ಚಿಸಿ ಶತ್ರುಗಳು ಒಳಗೆ ಬಾರದಂತೆ ನಿನ್ನ ಸಾಮರ್ಥ್ಯ ತೋರಿಸು. ನಮ್ಮ ಸೇನಾನಾಯಕನ ಹತ್ತಿರ, ಸೈನ್ಯಗಳನ್ನು ಸಿದ್ಧಪಡಿಸಿ ಬುರುಜುಗಳನ್ನೂ, ಅಗಳತೆಗಳನ್ನೂ ಕಾಪಾಡುವಂತೆ ನಾನು ಆಜ್ಞೆ ಮಾಡಿರುವೆನೆಂದು ಹೇಳು" ಎಂದನು.

"ಅಪ್ಪಣೆ ಮಹಾರಾಜಾ!" ಎಂದು ಬಾಗಿ ನಮಸ್ಕರಿಸಿ ಕಾವಲುಗಾರರ ನಾಯಕನು ಜೀವ ಉಳಿದದ್ದೇ ದೊಡ್ಡದೆಂಬ ಹಾಗೆ ಅಲ್ಲಿಂದ ಹೊರಟು ಹೋದನು. ಜಿತಕೇತು ರಾಜನು ಸಾಮಂತ ಸೂರ್ಯ ಭೂಪತಿಯ ಕಡೆಗೆ ತಿರುಗಿ, "ಆ ದುರ್ಮುಖ ರಾಜನ ಸಂಗತಿ ನಿನಗೆ ಗೊತ್ತಿರುವುದೆಂದಾಯಿತು. ಅವನ ಬಲವೂ ನಿನಗೆ ಗೊತ್ತಿದೆ. ಅವನು ದೊಡ್ಡ ಸೈನ್ಯ ತೆಗೆದುಕೊಂಡು ಬರುತ್ತಿದ್ದಾನೆಂದರೆ, ಎಷ್ಟು ದೊಡ್ಡ ಸೈನ್ಯವಿದೆ?" ಎಂದು ಕೇಳಿದನು.

ಸೂರ್ಯಭೂಪತಿ ದಿಗಿಲು ಬಡೆದ ಮುಖದಿಂದ, "ಅದನ್ನೇನು ಹೇಳಲಿ ಮಹಾರಾಜಾ! ಬಹಳ ಕಾಲದಿಂದ ನಾನು ಆ ಹಾಳು ರಾಜನ ಸಾಮಂತ

ಮರ್ಕಟನು ಬಾಲದ ತುದಿಯಿಂದ ಕೆಳಗೆ ಕುಕ್ಕಿದ ತನ್ನ ಕತ್ತಿಯನ್ನು ತೆಗೆದುಕೊಂಡು ಒರೆಯೊಳಗೆ ತುರುಕಿಕೊಂಡನು. ಜೀವಗುಪ್ತನು ರಾಜನನ್ನು ಕೋಪದಿಂದೊಮ್ಮೆ ನೋಡಿ, "ಮಹಾರಾಜರೇನೋ ನನಗೆ ಶಿರಚ್ಛೇದನ ಶಿಕ್ಷೆ ಕೊಟ್ಟೆನೆನ್ನುತ್ತಾರೆ. ಈ ಮರ್ಕಟನೇನೋ ದೇಶಬಿಟ್ಟು ಹೋಗಲು ಹೇಳು ತ್ತಾನೆ. ಯಾರ ಮಾತನ್ನು ಕೇಳಲಿ? ಸಭಾಸದರಾದ ಓ ಪ್ರಮುಖ ಮಹಾನುಭಾವರೆ! ನಾನೀಗ ಏನು ಮಾಡಬೇಕು? ನೀವು ಹೇಳಿರಿ" ಎಂದು ಸಭಿಕರನ್ನು ನೋಡಿ ಕೇಳಿದನು.

ಸಭೆಯವರು ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದವರಂತಿದ್ದರು. ರಾಜಾಜ್ಞೆಯನ್ನು ಬಲಪಡಿಸಬೇಕೋ, ಹೊಸತಾಗಿ ಮಂತ್ರಿಯಾದ ಮರ್ಕಟನ ಮಾತಿಗೆ ಹೌದೆನ್ನಬೇಕೋ ಗೊತ್ತಾಗದೆ, ಒಬ್ಬರನ್ನೊಬ್ಬರು ನೋಡಿಕೊಂಡು ಸುಮ್ಮನಿದ್ದುಬಿಟ್ಟರು. ರಾಜನೆಂದರೂ ಭಯವೇ, ಮರ್ಕಟಾಮಾತ್ಯನ ರೀತಿ ಅದಕ್ಕಿಂತ ಹೆಚ್ಚು ಭಯ!

ನಾಗಿದ್ದವನು. ಕಡೆಗೆ ಅವನು ರಾಜ್ಯವಾಳಲು ತಕ್ಕವ ನಲ್ಲವೆಂದು ತಿರುಗಿಬಿದ್ದು ಅವನ ನಗರವನ್ನು ಆಕ್ರಮಿಸಿ ಹಿಡಿದುಕೊಂಡೆ. ಆಗ ದುರ್ಮುಖನ ಬಹಳಮಂದಿ ಸೈನಿಕರು ನನಗೆ ಸಹಾಯಮಾಡಿದರು. ಆದರೆ ಮಧ್ಯ ದಲ್ಲಿ, ಕಾಳೀವರ್ಮನೆಂಬ ಕ್ಷತ್ರಿಯ ಯುವಕನೂ ಕರಡಿಕೆಂಗಣ್ಣನೆಂಬ ಮಾಂತ್ರಿಕನೂ, ನರಭಲ್ಲೂಕ ನಾದವನೊಬ್ಬನೂ, ಕಾಡಿನ ದಾರಿ ಹೊಡಕ ಕಳ್ಳರೂ ಇಂತಹ ಪುಂಡ ಪೋಕರಿಗಳೆಲ್ಲಾ ಒಂದಾಗಿ ಬಂದು ನನ್ನನ್ನು ಕೋಟೆಯೊಳಗಿನಿಂದ ಓಡಿಸಿಬಿಟ್ಟರು. ಆ ದುರ್ಮುಖರಾಜನಿಗೆ ಮುಖ್ಯ ಸಹಾಯಕರಾದವ ರೆಂದರೆ ಈ ಬಗೆಯ ಹಾಳು ಮೃಗ ಮನುಷ್ಯರೇ. ದೊಡ್ಡ ಸೈನ್ಯವೇನೂ ಅವನಿಗಿಲ್ಲ. ಸರಿಯಾದ ಸೈನ್ಯ ವಾದರೆ ನಾನೇಕೆ ಸೋತು ಓಡುತ್ತಿದ್ದೆ? ತುಂಬಾ ಅಕ್ರಮ!" ಎಂದನು.

ಸೂರ್ಯಭೂಪತಿ ಹೇಳಿದ ಮಾತುಗಳನ್ನು ಕೇಳಿ ಜಿತಕೇತುರಾಜನು ಸ್ವಲ್ಪ ಹೆದರಿದವನಾಗಿ ಮಾಯಾ ಮರ್ಕಟನನ್ನು ನೋಡಿ, "ಮರ್ಕಟಾಮಾತ್ಯಾ! ಈ ಸೂರ್ಯಭೂಪತಿ ಹೇಳುವುದನ್ನು ಕೇಳುವಾಗ, ಶತ್ರುಗಳು ಕೆಲವೇ ಮಂದಿಗಳಾದರೂ ಮಹಾ ಬಲಿಷ್ಠರೂ, ದೊಡ್ಡ ಸಾಹಸಿಗಳೂ ಎಂದು ಗೊತ್ತಾಗುತ್ತದೆ. ನಾವು ಕೋಟೆಯ ಹೊರಗಿನ ನಗರ ವನ್ನು ರಕ್ಷಿಸುವ ವಿಷಯ ಆ ಮೇಲೆ ನೋಡೋಣ. ಮೊದಲು ಈ ಕೋಟೆಯೊಳಗಿನ ವಠಾರವನ್ನು ಕಾಪಾಡಿಕೊಳ್ಳುವ ಮಾರ್ಗವೇನೆಂದು ಬೇಗ ನೋಡ ಬೇಕು. ಅದಕ್ಕೆ ನಿನ್ನ ಮಂತ್ರಾಲೋಚನೆ ಅತ್ಯಗತ್ಯ. ಬೇಗ ಆಲೋಚನೆ ಮಾಡಿ ಏನು ಮಾಡಬೇಕೆಂದು ಹೇಳಿಬಿಡು" ಎಂದನು.

ಎಲ್ಲವನ್ನೂ ಕೇಳಿಕೊಂಡೂ ನೋಡಿಕೊಂಡೂ ಇದ್ದ ಮಾಯಾಮರ್ಕಟನು, ರಾಜನು ತನ್ನನ್ನೇ ನಂಬಿ ಕೊಂಡವನಂತೆ ಹೇಳಿದುದನ್ನು ಕೇಳಿ, ಅದೆಷ್ಟರ ವಿಷಯವೆಂಬಂತೆ ಒಮ್ಮೆ ಹಾರಿ, "ಓಯ್ ಮಹಾ



ರಾಜಾ! ಕೋಟೆಯ ರಕ್ಷಣೆಯನ್ನು ಕುರಿತು ನೀನೇನೂ ಹೆದರಬೇಡ. ಆ ಕರಡಿಕೆಂಗಣ್ಣನೂ, ಅವನ ಒತ್ತಾಸೆ ಯವರೂ ಸೂರ್ಯಭೂಪತಿಯ ಕೋಟೆಯೊಳಗೆ ಹೇಗೆ ಪ್ರವೇಶಿಸಿದರು ಗೊತ್ತಾ? ಆ ಕೋಟೆಯ ದ್ವಾರಕ್ಕೆ ಬೆಂಕಿ ಹಚ್ಚಿ ಸುಟ್ಟು! ಆದುದರಿಂದ ಈಗ ಮುಖ್ಯವಾಗಿ ಮಾಡಬೇಕಾದ್ದು ದ್ವಾರರಕ್ಷಣೆ. ಗೊತ್ತಾ ಯಿತೇ? ಬೆಂಕಿ ಹಿಡಿಯದ ಹಾಗೆ..." ಎನ್ನು ವಷ್ಟರಲ್ಲಿ ರಾಜನು "ಗೊತ್ತಾಯಿತು. ಸಾಮಂತ ಸೂರ್ಯಭೂಪತೀ! ನೀನು ಒಂದುಸಾರಿ ದ್ವಾರ ರಕ್ಷಣೆಯನ್ನು ಸರಿಯಾಗಿ ನೋಡಿಕೊಳ್ಳದೆ ಸಿಕ್ಕಿದ ಸಿಂಹಾಸನವನ್ನು ಜಾರಬಿಟ್ಟವನಾದ್ದರಿಂದ, ನಿನ್ನನ್ನೇ ನಮ್ಮ ಕೋಟೆಯ ದ್ವಾರರಕ್ಷಣೆಗೆ ನಿಯಮಿಸುತ್ತೇನೆ. ಈ ಬಾಧ್ಯತೆಯನ್ನು ಸಾಮರ್ಥ್ಯದಿಂದ ನೆರವೇರಿಸಿದಿ ಯಾದರೆ, ನಿನ್ನನ್ನು ನನ್ನ ಪ್ರಧಾನ ಸಾಮಂತನನ್ನಾಗಿ ಮಾಡಿ ಗೌರವಿಸುತ್ತೇನೆ. ಬೇಗ ಹೋಗಿ ನಿನ್ನ ಸಾಮರ್ಥ್ಯವನ್ನು ತೋರಿಸು." ಎಂದನು.



ಹೊರಟನು. ಅವರಿಬ್ಬರ ಹಿಂದೆ ಸ್ವಲ್ಪ ದೂರದಲ್ಲಿ ಸಭೆಯಲ್ಲಿದ್ದ ಪುರಪ್ರಮುಖರೂ ಹೊರಗೆ ಸಾಗಿದರು. ಹೀಗೆ ಎಲ್ಲರೂ ಸಭಾಭವನದೊಳಗಿನಿಂದ ಹೊರಗಿನ ಅಂಗಳಕ್ಕೆ ನಡೆದರು.

ಆಗ ಮಾಯಾಮರ್ಕಟನು ಏನೋ ನೆನಪಾದವ ನಂತೆ ಭವನದೊಳಗಿನಿಂದ ಮೆಟ್ಟಲಿನವರೆಗೆ ಬಂದು ಅಲ್ಲಿಯೇ ನಿಂತು, ಕತ್ತಿಯನ್ನು ಮೇಲೆತ್ತಿ ಹಿಡಿದು, ಬಾಲವನ್ನು ಗಿರಗಿರ ತಿರುಗಿಸುತ್ತ, "ಕೇಳಿರೆಲ್ಲರೂ! ನನ್ನ ಕೈಯಲ್ಲಿದ್ದ ಮಂತ್ರದಂಡವನ್ನು, ಕರಡೀ ಆಟ ಗಾರನ ಗುಂಪಿನವರಾರೋ ಕದ್ದಿರುವರು. ಅದನ್ನು ತಿರಿಗಿ ತಂದುಕೊಟ್ಟವರಿಗೆ ಜಿತಕೇತು ಮಹಾರಾಜರು ಅರ್ಧರಾಜ್ಯವನ್ನೂ ಕೊಟ್ಟು ತಮ್ಮ ಕುಮಾರಿಯನ್ನೂ ಮದುವೆಮಾಡಿ ಕೊಡುತ್ತಾರೆ." ಎಂದು ಕೂಗಿ ಹೇಳಿದನು.

ಮರ್ಕಟನ ಮಾತನ್ನು ಕೇಳಿ ಎಲ್ಲರೂ ಆಶ್ಚರ್ಯ ದಿಂದ ಹಾಗೆ ಹಾಗೇ ನಿಂತರು. ಜೀವಗುಪ್ತನು ಗಹಗಹಿಸಿ ನಗುತ್ತ, "ಆಹಾ! ಅದ್ಭುತ ಸಾಮರ್ಥ್ಯ ಶಾಲಿಯಾದ ಈ ಮರ್ಕಟ ಮಂತ್ರಿರಾಯರಿಗೆ, ಅಲ್ಲಲ್ಲ, ಹೊಸ ಮರ್ಕಟ ರಾಜರಿಗೆ ಅಸಲೇ ಸಂತಾನ ವಿಲ್ಲದ ಮಾಜೀ ರಾಜನ ಸಂಗತಿ ಗೊತ್ತಿಲ್ಲದೆ ಭಾರೀ ಭಾರೀ ದಾನಗಳನ್ನು ಸಾರಿಬಿಟ್ಟರಲ್ಲ! ಏನು ಸಾಮರ್ಥ್ಯವಪ್ಪಾ!" ಎಂದನು.

ಮಂತ್ರಿಯ ಮಾತು ಕೇಳಿ ಎಲ್ಲರೂ ಗೊಳ್ಳೆಂದು ನಕ್ಕರು. ಅಷ್ಟರಲ್ಲಿ ಅಲ್ಲಿಗೆ ಬಂದ ಜಿತಕೇತುರಾಜನು ಜನರ ಕಡೆಗೆ ಕೈಯಾಡಿಸಿದನು. ಮಾಯಾಮರ್ಕಟನು ಜಿತಕೇತುರಾಜನನ್ನು ಕೋಪದಿಂದ ನೋಡುತ್ತ, "ಓಯ್! ಎಂಥಾ ಬರಡು ರಾಜನಯ್ಯ ನೀನು? ನಿನಗೆ ಸಂತಾನವೇ ಇಲ್ಲವೇನು?" ಎಂದು ಕೇಳಿದನು.

"ಮರ್ಕಟಾಮಾತ್ಯಾ! ಆ ಸಮಾಚಾರವನ್ನೆಲ್ಲ ಆಮೇಲೆ ಹೇಳುತ್ತೇನೆ. ಮೊದಲು ಆ ಮಂತ್ರ

"ಅಪ್ಪಣೆ ಮಹಾರಾಜರೇ!" ಎಂದು ಹೇಳಿ ಸೂರ್ಯಭೂಪತಿ ಅಲ್ಲಿಂದ ಹೊರಡಲು ಸಿದ್ಧ ನಾದನು. ಆಗ ಜೀವಗುಪ್ತನು ದೊಡ್ಡ ಕಂಠಸ್ವರ ದಿಂದ, "ಹಾಗಾದರೆ ಈಗ ನನ್ನ ವಿಷಯ ಏನಾಯಿತು? ಸರಿಯಾಗಿ ತಿಳಿಯಲಿಲ್ಲವಲ್ಲಾ? ನನ್ನ ಉದ್ಯೋಗ ನಿಂತಿದೆಯೋ ಹೋಗಿದೆಯೋ?" ಎಂದು ಕೇಳಿದನು.

ಆ ಪ್ರಶ್ನೆಯನ್ನು ಕೇಳಿ ಮಾಯಾಮರ್ಕಟನು ಕೀಚೆಂದು ಅರಚಿ, "ಎಲೋ ಹಳೇಮಂತ್ರೀ! ನಿನ್ನ ಉದ್ಯೋಗ ಯಾವಾಗಲೋ ಹೊರಟುಹೋಯಿತು. ತಲೆ ಮಾತ್ರ ಇನ್ನು ಕೆಲವು ದಿನಗಳವರೆಗೆ ಕೊರಳಿನ ಮೇಲಿರುತ್ತೆ. ತಕ್ಷಣವೇ ಈ ಸಭಾ ಭವನದಿಂದ ಹೊರಗೆ ನಡೆ!" ಎಂದನು. ರಾಜನು ಮಾತಾಡಲಿಲ್ಲ.

"ಸರಿ ಹೊರಟೆ ಮರ್ಕಟಾಮಾತ್ಯಾ, ಅಲ್ಲಲ್ಲ ಮರ್ಕಟ ಮಹಾರಾಜಾ!" ಎಂದು ಹೇಳಿ ಜೀವ ಗುಪ್ತನು ಸೂರ್ಯಭೂಪತಿಯ ಹಿಂದೆಯೇ

ದಂಡವು ಅಷ್ಟು ಮುಖ್ಯವೇನು? ಅದಿಲ್ಲದೆ ಶತ್ರುಗಳನ್ನು ಜಯಿಸಲು ನಿನಗಾಗದೇ?" ಎಂದು ಕೇಳಿದನು ರಾಜ.

"ಮುಖ್ಯವೇ ಎಂದು ಕೇಳುವೆಯಲ್ಲಾ? ಒಂದೂ ಗೊತ್ತಿಲ್ಲದ ನೀನೆಂಥ ರಾಜನೋ! ಆ ಮಂತ್ರದಂಡವು ಕೈಯಲ್ಲಿದ್ದರೆ ಅಸಾಧ್ಯವೆಂಬ ಮಾತೇ ಇಲ್ಲ. ಅದನ್ನು ಮೀರಿಸುವ ಶಕ್ತಿ ಈ ಲೋಕದಲ್ಲೇ ಇಲ್ಲವೆಂದು ತಿಳಿ! ನಿಮ್ಮ ಸಿಂಹಾಸನವನ್ನಲ್ಲದೆ ನಿನ್ನ ಪ್ರಾಣ ಕಾಪಾಡಲಿಕ್ಕೂ ಅದು ಬೇಕೇ ಬೇಕು. ಅದೀಗ ನನಗೆ ಸಿಕ್ಕಲೇ ಬೇಕು." ಎಂದನು ಮಾಯಾಮರ್ಕಟ.

ಕೂಡಲೇ ರಾಜನು ಕೈಯೆತ್ತಿ ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ, "ನನಗೆ ಕುಮಾರಿ ಇಲ್ಲವೆಂದು ಯಾರೂ ಸಂಶಯ ಪಡಬೇಡಿರಿ, ಒಬ್ಬಳು ಕನ್ಯೆಯನ್ನು ದತ್ತಕ್ಕೆ ತೆಗೆದುಕೊಂಡು ನನ್ನ ಅರ್ಧ ರಾಜ್ಯದೊಂದಿಗೆ ಆ ಮಂತ್ರದಂಡ ತಂದುಕೊಟ್ಟವನಿಗೆ ವಿವಾಹಮಾಡಿ ಕೊಡುತ್ತೇನೆ. ಬೇಗ ಬರಲಿ ನಮ್ಮ ಮರ್ಕಟಾಮಾತ್ಯನ ಮಂತ್ರದಂಡ." ಎಂದನು.

ಅವನ ಮಾತನ್ನು ಕೇಳಿ ಅಲ್ಲಿದ್ದವರೆಲ್ಲ ಹರ್ಷಧ್ವಾನ ಮಾಡಿದರು. ಅದಕ್ಕೆ ಮೊದಲು ಆಟವಿಕನ ಕರಡಿಯಾಟ ನೋಡಲು ಬಂದವರ ಗುಂಪಿನಲ್ಲಿ ಕೆಲವರು ದೂರದಲ್ಲಿ ನಿಂತಿದ್ದರು. ಅವರಲ್ಲಿ ಬೈರಾಗಿಗಳಂತೆ ಕಾಣುವ ಯುವಕರಿಬ್ಬರು, ರಾಜನು ಹೇಳಿದ ಮಾತು ಕೇಳಿ ಸಂತೋಷವನ್ನು ತಾಳಲಾರದೆ ಹಾರಿ ಕುಣಿದರು. ಅವರಲ್ಲೊಬ್ಬನು ತನ್ನ ಜೋಳಿಗೆಯೊಳಗೆ ಕೈ ಹಾಕುವಾಗ, ಎರಡನೆಯವನು ಅವನನ್ನು ತಡೆಯುತ್ತ, "ಲೋ ಉಪಶಿಷ್ಯಾ, ಅವಸರಪಡಬೇಡ. ಮೊದಲು ನಮ್ಮ ಗುರುಗಳ ಅಭಿಪ್ರಾಯ ತಿಳಿದುಕೊಳ್ಳುವುದು ಒಳ್ಳೆಯದು" ಎಂದನು.

ಆ ಕೂಡಲೇ ಆ ಬೈರಾಗಿ ಯುವಕರಿಬ್ಬರೂ ಅಲ್ಲಿಂದ ಹೊರಟರು. ಪುರಪ್ರಮುಖರು ಜಿತಕೇತು ರಾಜನಿಗೆ, ಮಂತ್ರದಂಡ ತಂದುಕೊಟ್ಟವನಿಗೆ ಬಹುಮಾನ ಕೊಡುವ ಸಂಗತಿಯನ್ನು ಡಂಗುರ ಹೊಡೆಸಿದರೆ ಒಳ್ಳೆಯದೆಂದು ಸಲಹೆ ಕೊಡುತ್ತಿದ್ದರು. ಆ ಸಮಯದಲ್ಲಿ ಒಂದು ಬಾಣವು ಕೋಟೆಯ





ಬಿತ್ತು. ಆ ಬಂಡೆಗಲ್ಲಿನ ಏಟಿನಿಂದ ರಾಜಭವನದ ಗೋಡೆಯಲ್ಲಿ ಒಡಕುಬಿಟ್ಟಿತು. ಮನುಷ್ಯರು ದೂರ ಓಡಿದ್ದರಿಂದ ಬದುಕಿದರು.

ಇದನ್ನು ನೋಡಿ ಜಿತಕೇತುರಾಜನು ತಲೆಯಿಂದ ಕಾಲಿನವರೆಗೆ ನಡುಗುತ್ತ, "ಇಷ್ಟು ದೊಡ್ಡ ಬಂಡೆಗಲ್ಲನ್ನು ಕೋಟೆಯ ಹೊರಗಿನಿಂದ ಬಿಸುಟವನು ಸಾಮಾನ್ಯ ಮನುಷ್ಯನೇ ಅಲ್ಲ. ರಾಕ್ಷಸನೇ! ಅಯ್ಯೊ! ಮರ್ಕಟಾಮಾತ್ಯಾ! ಮಾನವರಾದ ನಾವು ಇಂತಹ ರಾಕ್ಷಸರೊಂದಿಗೆ ಹೋರಾಡುವುದುಂಟೆ? ಬದುಕಬಲ್ಲೆವಾ? ನಮ್ಮ ಶವಗಳೂ ಉಳಿಯಲಾರವಲ್ಲಾ! ಈ ಸಾಕ್ಷಾತ್ ಮೃತ್ಯುವಿನಿಂದ ನಮ್ಮನ್ನು ಕಾಯುವವರಾರೋ!" ಎಂದನು ಪ್ರಲಾಪ ಧ್ವನಿಯಿಂದ.

ಅಷ್ಟು ದೊಡ್ಡ ಬಂಡೆ ಬಿದ್ದುದನ್ನು ನೋಡಿದ ಕೂಡಲೇ ಪುರಪ್ರಮುಖರೂ ಮಾಮೂಲು ಜನರೂ, ಮೇಲೆ ಮೇಲೆ ಅಂತಹ ಹೆಬ್ಬಂಡೆಗಳು ಬೀಸಿ ಬರುವುದೆಂದು ಭ್ರಮಿಸಿ ಹೆದರಿ ಅಲ್ಲಿಂದ ಓಡತೊಡಗಿದರು. ಮಾಯಾಮರ್ಕಟನು ರಾಜನಿಗೆ ಧೈರ್ಯ ಹೇಳುತ್ತ, "ಎಲೋ ರಾಜಾ! ಹೆದರಬೇಡ ಇದಕ್ಕೆಲ್ಲಾ! ಬ್ರಹ್ಮಪುತ್ರಾ ನದಿಯ ಕಣಿವೇ ಪ್ರಾಂತದಲ್ಲಿ ಇಂತಹ ಮಹಾಬಲಶಾಲಿಗಳಾದ ಎಷ್ಟೋಮಂದಿ ರಾಕ್ಷಸರನ್ನು ನನ್ನ ಗುರುವಾದ ಮಿಥ್ಯಾಮಿಶ್ರರು ಹಿಡಿದು ಬಂಧಿಸಿ ತಮ್ಮ ಅಡಿಯಾಳುಗಳನ್ನಾಗಿ ಮಾಡಿಕೊಂಡಿದ್ದಾರೆ ಗೊತ್ತಾ? ಇವನೊಬ್ಬ ಯಃಕಶ್ಚಿತ್ ರಾಕ್ಷಸ ನನಗೊಂದು ಲೆಕ್ಕವೇ? ಅವನನ್ನು ಧೂಳು ಹಾರಿಸಿಬಿಡುತ್ತೇನೆ!" ಎಂದನು.

ರಾಜನು ನಾಲಗೆಯಿಂದ ತುಟಿಗಳನ್ನು ತಡವಿಕೊಳ್ಳುತ್ತ, "ಅಮಾತ್ಯಾ! ಈಗ ನೀನೇ ನಮಗೆ ಗತಿ! ನಿನ್ನ ಆ ಗುರುವನ್ನು ನಿನ್ನ ಮಂತ್ರಶಕ್ತಿಯಿಂದ ಈಗಲೇ ಕರೆಸಿ ಈ ಮಹಾಪಾಯದಿಂದ ನನ್ನನ್ನೂ ನನ್ನ ರಾಜ್ಯವನ್ನೂ ಕಾಪಾಡಲಾರೆಯಾ?" ಎಂದು ಅಂಗಲಾಚಿದನು.

ಗೋಡೆಯ ಮೇಲಿನಿಂದ ಹಾರಿ ಬಂದು ಆ ಜನರ ಗುಂಪಿನ ನಡುವೆ ಬಿದ್ದಿತು.

ಎಲ್ಲರೂ ಹೋಹಾ ಎಂದು ಕಿರಿಚಿ ಆಚೀಚೆ ಓಡಿದರು. ಆಮೇಲೆ ಕೆಲವರು ಆ ಬಾಣವನ್ನು ಎತ್ತಿಕೊಳ್ಳಲು ನೋಡಿದರು. ಆಗ ಮಾಯಾಮರ್ಕಟನು "ನಿಲ್ಲಿರಿ" ಎನ್ನುತ್ತಾ ಓಡಿ ಬಂದು ಆ ಬಾಣವನ್ನು ಎತ್ತಿ ಪರೀಕ್ಷಿಸಿ ನೋಡಿ, ಹಲ್ಲು ಕಡಿಯುತ್ತ ಅದನ್ನು ಮುರಿದು ನಾಲ್ಕಾರು ತುಂಡು ಮಾಡಿ ದೂರ ಬಿಸುಡುತ್ತ, "ಈಗ ಈ ಬಾಣವನ್ನು ಮಾಡಿದ ಹಾಗೆಯೇ ಇದನ್ನು ಪ್ರಯೋಗಿಸಿದ ಶತ್ರುಗಳನ್ನೂ ಮಾಡಿ ಬಿಸುಡುತ್ತೇನೆ. ಹುಂ, ನನ್ನ ಮಂತ್ರದಂಡ ಎಲ್ಲಿ? ಅದಿಲ್ಲದೆ ಏನೂ ಸಾಧ್ಯವಿಲ್ಲವೆಂದು ಹೇಳಿದೆನಲ್ಲಾ?" ಎಂದು ಕೂಗಿ ಅತ್ತಿತ್ತ ಹಾರಿದನು.

ಅಷ್ಟರಲ್ಲಿ ದೊಡ್ಡದೊಂದು ಬಂಡೇಕಲ್ಲು ಕೋಟೆಯ ಮೇಲಿನಿಂದಾಗಿ ಜೊಂಯ್ಯನೆ ಬಂದು ರಾಜಭವನದ ಗೋಡೆಗೆ ಬಡೆದು ಧಡಾರನೆ ಕೆಳಗೆ

ಮಾಯಾಮರ್ಕಟನು ಎರಡು ಮೂರು ಕಿಚಕಿಚ ನಗುವನ್ನು ಉದುರಿಸಿ, "ಓ ರಾಜಾ! ನೀನು ಏನೂ ತಿಳಿಯದ ಮಗುವಿನಂಥ ಮೂಢ ಮುಗ್ಧನು! ನನ್ನ ಗುರುಗಳು ಯಾರೆಂದುಕೊಂಡೆ? ನಿನ್ನಂಥಾ ಸಣ್ಣ ಪುಟ್ಟ ರಾಜರನ್ನು ರಕ್ಷಿಸಲಿಕ್ಕಾಗಿ ಆ ಕಣಿವೆಯಿಂದ ಇಲ್ಲಿಗೆ ಬರುವರೆಂದುಕೊಂಡೆಯಾ? ಅವರು ತನ್ನ ಮಂತ್ರ ತಂತ್ರ ಶಕ್ತಿಗಳಿಂದ ಈ ಲೋಕವನ್ನೂ, ಆ ಮೇಲೆ ಮೇಲಿನ ಲೋಕಗಳನ್ನೂ ಜಯಿಸಬೇಕೆಂಬ ಉದ್ದೇಶದಲ್ಲಿದ್ದಾರೆ. ಈ ಕಾರ್ಯಕ್ಕೆ ಅವರಿಗೆ ಭಲ್ಲೂಕ ಪಾದನೆಂಬ ತುಚ್ಛ ಮಾಂತ್ರಿಕನೊಬ್ಬ ಅಡ್ಡ ತಗಲುತ್ತಿದ್ದಾನೆ. ಅವನ ಶಿಷ್ಯನೇ ಈಗ ಇಲ್ಲಿ ಕೋಟೆಯ ಹೊರಗೆ ಬಂದಿರುವ ಕರಡಿಕೆಂಗಣ್ಣ ಎಂಬ ಮಾಂತ್ರಿಕ! ಅವನ ಮಂತ್ರದಂಡ ನನ್ನ ಕೈಗೆ ಸಿಕ್ಕಿ ಈಗ ಹಲ್ಲು ಮುರಿದವನ ಹಾಗೆ ಆಗಿದ್ದಾನೆ. ಎಲ್ಲಿ ಆ ಮಂತ್ರ ದಂಡ? " ಎಂದನು.

ಮರ್ಕಟನ ಮಾತುಗಳನ್ನು ಕೇಳುವಾಗ ಜಿತಕೇತು ರಾಜನಿಗೆ ಒಂದು ಅನುಮಾನ ಉಂಟಾಯಿತು. ಯಾರೋ ಇಬ್ಬರು ಮಾಂತ್ರಿಕರು, ಏನೋ ಅಪೂರ್ವ ಕಾರ್ಯಗಳನ್ನು ಸಾಧಿಸಲಿಕ್ಕಾಗಿ ತನ್ನಂಥವರನ್ನು ಜೂಜಿನ ದಾಳಗಳಂತೆ ಉಪಯೋಗಿಸುತ್ತಿದ್ದಾರೇನೋ? ಈ ಮರ್ಕಟನಿಗೆ ತನ್ನ ಶತ್ರುವಾದ ಕರಡಿಕೆಂಗಣ್ಣ ಮಾಂತ್ರಿಕನನ್ನು ಹತಮಾಡಬೇಕಾದುದೇ ಮುಖ್ಯಕಾರ್ಯವಲ್ಲದೆ, ತನ್ನಂತಹ ರಾಜನ ಗೊಡವೆ ಇವನಿಗಿಲ್ಲವೇನೋ? ಯಾವುದಕ್ಕೂ ಕೋಟೆಯ ರಕ್ಷಣೆಯನ್ನು ತಾನೇ ನೋಡಿಕೊಳ್ಳಬೇಕಾದುದು ಎಲ್ಲಾ ವಿಧದಲ್ಲಿ ಕ್ಷೇಮವಾದೀತು.

ರಾಜನು ಹೀಗೆ ಆಲೋಚಿಸಿ ಮಾಯಾಮರ್ಕಟನೊಂದಿಗೆ, "ಮರ್ಕಟಾಮಾತ್ಯಾ! ನಾವು ಕೋಟೆ ಗೋಡೆಯ ಮೇಲಕ್ಕೆ ಹೋಗಿ ಶತ್ರುಗಳು ಎಷ್ಟು ದೂರದಲ್ಲಿದ್ದಾರೆಂದು ನೋಡಬೇಕು. ಸೈನಿಕರನ್ನು ಕೂಡಾ ತಕ್ಕ ಜಾಗರೂಕತೆಯಿಂದ ಇರಲು ಎಚ್ಚರಿಸಬೇಕು. ಆ ಸೂರ್ಯಭೂಪತಿ ಏನುಮಾಡಿದನೋ ಗಮನಿಸಬೇಕು. ಅಷ್ಟರೊಳಗೆ ನಿನ್ನ ಮಂತ್ರದಂಡವೂ ಬಂದೀತು ಹೋಗೋಣ." ಎಂದು ಹೇಳಿ, ಮರ್ಕಟನ



ಪ್ರತ್ಯುತ್ತರಕ್ಕೆ ಕಾಯದೆ ಕೋಟೆ ಬುರುಜಿನ ಕಡೆಗೆ ಬೇಗಬೇಗನೆ ನಡೆಯ ತೊಡಗಿದನು.

"ಅದು ಏನಾದರೂ ಈಗ ನನ್ನ ಮಂತ್ರದಂಡವು ಎಲ್ಲಿದೇ? ಹೇಗೆ ಬರುತ್ತೆ? ಯಾರು ತರುತ್ತಾರೆ? ಯಾವನು ಕದ್ದವನು?" ಎಂದು ಕೂಗಿ ಮಾಯಾ ಮರ್ಕಟನು ರಾಜನನ್ನು ಅನುಸರಿಸಿದನು.

ಜಿತಕೇತು ರಾಜನೂ ಮಾಯಾಮರ್ಕಟನೂ ಕೋಟೆಯ ಗೋಡೆಯ ಮೇಲಿನಿಂದ, ಮುಂದಿನ ಮೈದಾನದ ಕಡೆಗೆ ನೋಡಿದರು. ಅಲ್ಲಿ ಕುದುರೆಯ ಮೇಲೆ ಕಾಳೀವರ್ಮನೂ, ಕೋಣದ ಮೇಲೆ ಕರಡಿ ಕೆಂಗಣ್ಣ ಮಾಂತ್ರಿಕನೂ, ಆನೆಯ ಮೇಲೆ ಕಟುಕ ಕರಡಿಯುವನೂ, ಉಗ್ರದಂಡ ರಾಕ್ಷಸನೂ, ಇನ್ನೂ ಕೆಲಮಂದಿ ಸೈನಿಕರೂ ಇದ್ದರು.

ರಾಜನು ಅವರನ್ನು ನೋಡಿ ನಡುಗುತ್ತ, "ಮರ್ಕಟಾಮಾತ್ಯಾ. ಅಲ್ಲಿ ನೋಡುವಾಗ, ಉಳಿದವರಿಗಿಂತಲೂ, ಆ ರಾಕ್ಷಸನನ್ನು ನೋಡಿದರೇನೇ ನನ್ನ ಎದೆ ನೀರಾಗಿ ಹೋಗುತ್ತದೆ. ಅವನನ್ನು ಜಯಿಸುವುದು ಮಾನವರಿಂದ ಸಾಧ್ಯವೇ? ಅಬ್ಬಬ್ಬಾ! ಏನು ಘೋರ!" ಎಂದನು.

"ಮಾನವ ಸಾಧ್ಯವಲ್ಲದ್ದೆಲಾ ಮಂತ್ರಸಾಧ್ಯವೆಂದು ಹಿರಿಯರು ಹೇಳಿದ್ದಾರೆ. ಹಾಗೆ ಮಂತ್ರದಿಂದಲೂ ಸಾಧ್ಯವಲ್ಲದ್ದು ತಂತ್ರಸಾಧ್ಯವೆಂದು ಪಂಡಿತರು ಹೇಳುತ್ತಾರೆ. ಅಯ್ಯಯ್ಯೋ! ಈಗ ನನ್ನ ಆ ಮಂತ್ರ ದಂಡವೆಲ್ಲೀ? ಎಲ್ಲಿ?" ಎಂದು ಕೂಗುತ್ತ, ಮಾಯಾ ಮರ್ಕಟನು ಎಗರಾಡ ತೊಡಗಿದನು.

ಮರ್ಕಟನ ಕೂಗು ಕೇಳಿ, ಮೈದಾನದಲ್ಲಿದ್ದ ಆಟವಿಕನು ಆನೆಯ ಮೇಲೆ ಎದ್ದು ನಿಂತು ಬಾಣವನ್ನು ಮರ್ಕಟನ ಎದೆಗೆ ಗುರಿ ಹಿಡಿದು, "ಎಲೋ ಕೋತಿ ಮುಖದವನೇ! ಮಹಾದ್ರೋಹಿಯೇ! ಇಕೋ ನಿನ್ನ ಮಂತ್ರದಂಡವು ಬಾಣದ ರೂಪದಲ್ಲಿ ಬರುತ್ತಿದೆ! ಇದರೊಂದಿಗೆ ನಿನ್ನ ಪ್ರಾಣವೂ ಹಾರಿ ಹೋಗುತ್ತದೆ." ಎಂದು ಕೂಗಿ ಬಾಣವನ್ನು ಬಿಟ್ಟನು. ಅದು ರೊಯ್ಯನೆ ಬಂದು ಮರ್ಕಟನ ಮೊಣ ಕಾಲಿಗೆ ತಗಲಿತು, ಅವನು ಹಾರಿದುದರಿಂದ.

ಬಾಣದೇಟನ್ನು ತಿಂದ ಮಾಯಾಮರ್ಕಟನು, "ಹೋ! ತಾಂತ್ರಿಕ ಗುರೋ! ರಕ್ಷ! ರಕ್ಷ!" ಎಂದು ಕೂಗಿ ಅಂಗಾತ ಬಿದ್ದನು.

ಕೂಡಲೇ ತಟ್ಟನೆ ಎದ್ದು ನಿಂತು, ಬಾಣವನ್ನು ಎರಡು ಕೈಗಳಿಂದಲೂ ಹಿಡಿದು ಹಲ್ಲು ಕಚ್ಚಿ ಹೊರಗೆಳೆದು, "ಹುಲು ಮನುಷ್ಯರೇ! ನಿಮ್ಮ ಮುರುಕು ಬಾಣಗಳಿಂದ ಈ ಭ್ರಾಂತಿಮತಿಯನ್ನು ಏನು ಮಾಡಬಲ್ಲಿರಿ?" ಎನ್ನುತ್ತ ಆ ಬಾಣವನ್ನು ಕಾಳೀವರ್ಮ, ಕರಡಿಕೆಂಗಣ್ಣರ ಕಡೆಗೇ ತನ್ನೆಲ್ಲ ಶಕ್ತಿಯಿಂದ ಎಸೆದುಬಿಟ್ಟನು. —(ಇನ್ನೂ ಇದೆ)






# ಮಾತಿನ ಬೆಲೆ

ಜಿದ್ದಿನಮುದ್ದೆಯಾದ ರಾಜಾ ತ್ರಿವಿಕ್ರಮನು ಗೋಡೆಗೆ ಬಡೆದ ಚೆಂಡು ಹಿಂದೆ ಹಾರುವಂತೆ ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವ ವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹಾಕಿಕೊಂಡು, ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯುತೊಡಗಿದನು. ಆಗ ಆ ಶವದೊಳಗಿರುವ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾ ರಾಜನೇ, ನಿನ್ನಂತಹ ಕೆಲವು ಮಹಾರಾಜರಿಗೆ ಮಾತು ಗಳಿಗಿರುವ ತಾರತಮ್ಯವು ತಳಿಯುವುದಿಲ್ಲ. ಯಾರ ಮಾತಿನಿಂದಲೋ ಏನೋ ಅಂದುಕೊಂಡು, ಹೀಗೆ ರಾತ್ರೀಹಗಲೂ ಕಷ್ಟಪಡುವಿಯೇನೋ ? ಹಾಯಾಗಿ ವಿಶ್ರಾಂತಿ ಪಡೆಯಬೇಕಾದ ನಿನಗೆ ಈ ಕಷ್ಟ ಏತಕ್ಕೋ ? ಹೀಗೆಯೇ ಚಂದ್ರಗಿರಿಯ ರಾಜನು ಒಬ್ಬ ಅನಾಗರಿಕನಿಂದ ಕೇಳಬಾರದ ಮಾತು ಕೇಳಿ ಸುಮ್ಮನಿದ್ದ. ನಾಗರಿಕ ಪಂಡಿತನೊಬ್ಬ, ಆ ರೀತಿಯ ಮಾತುಗಳನ್ನೇ ಹೇಳಿದರೆ ಸಹಿಸಲಾರದೆ ಹೋದ. ದಾರಿಯ ಶ್ರಮ ತಿಳಿಯದಂತೆ ಆ ಕಥೆಯನ್ನು ಹೇಳು ತ್ತೇನೆ. ಕೇಳು" ಎಂದು ಕಥೆಯನ್ನು ಪ್ರಾರಂಭ ಮಾಡಿತು :

## ಬೇತಾಳ ಕಥೆಗಳು



ಚಂದ್ರಗಿರಿಯ ರಾಜನು ಆಗಾಗ ವೇಷಮಾರ್ಪಡಿಸಿ ಕೊಂಡು ದೇಶಸಂಚಾರ ಮಾಡುವ ಕ್ರಮವಿಟ್ಟುಕೊಂಡಿದ್ದನು. ಒಂದುಸಾರಿ ಅವನು ಯಾವುದೋ ಒಂದು ದಾರಿಯಲ್ಲಿ ಪ್ರಯಾಣ ಮಾಡುತ್ತಿದ್ದಾಗ, ದೊಡ್ಡದೊಂದು ಆಪತ್ತನ್ನು ಇದಿರಿಸಬೇಕಾಗಿ ಬಂತು. ಆಗ ಒಬ್ಬ ಕುರುಬನು ಓಡಿಬಂದು ರಾಜನನ್ನು ಪ್ರಾಣಾಪಾಯದಿಂದ ಕಾಪಾಡಿದನು. ರಾಜಧಾನಿಗೆ ಹಿಂದಿರುಗಿದ ಮೇಲೆ ರಾಜನು ತನ್ನ ಸೇವಕರನ್ನು ಕಳುಹಿಸಿ, ಆ ಕುರುಬನನ್ನು ಸಕಲ ಮರ್ಯಾದೆಗಳೊಂದಿಗೆ ತನ್ನ ಬಳಿಗೆ ಕರೆಯಿಸಿಕೊಂಡನು.

ರಾಜನ ದೊಡ್ಡ ಸಭೆಗೆ ಕಾಲಿಟ್ಟ ಕೂಡಲೇ ಆ ಕುರುಬನಿಗೆ ಅತ್ಯಾಶ್ಚರ್ಯವಾಯಿತು. ಬೆಕ್ಕಸ ಬೆರಗಾಗಿನಿಂತ ಅವನನ್ನು ನೋಡಿ ರಾಜನು ಸಿಂಹಾಸನದಿಂದ ಇಳಿದು ಬಂದು, "ಗುರುತಿದೆಯಾ? ನೀನು ನನ್ನ ಪ್ರಾಣವನ್ನು ಕಾಪಾಡಿದಿ! ನಿನಗೆ ಸನ್ಮಾನ ಮಾಡಲಿಕ್ಕಾಗಿ ಕರೆಯಿಸಿದ್ದೇನೆ." ಎಂದನು.

ಕುರುಬನು ರಾಜನ ಗುರುತು ಹಿಡಿದು, "ಏನಿದು? ನೀವು ಈ ದೇಶದ ದೊರೆಗಳೇ? ನಿಮ್ಮನ್ನೇ ನೀವು ಕಾಪಾಡಿಕೊಳ್ಳಲಾಗದಿರುವಾಗ, ಈ ಸಿಂಹಾಸನದ ಮೇಲೆ ಕುಳಿತುಕೊಂಡು ನಮ್ಮೆಲ್ಲರನ್ನೂ ಏನು ಆಳುವಿರಪ್ಪ!" ಎಂದು ಅದ್ಭುತ ನೋಡಿದವನಂತೆ ಕೇಳಿದನು.

ಅವನ ಮಾತುಗಳಿಂದ ರಾಜನಿಗೆ ಮಹಾ ಕೋಪ ಬಂದು, ಆ ಗೊಲ್ಲನಿಗೆ ಏನು ಶಿಕ್ಷೆ ಕೊಡುತ್ತಾನೋ ಎಂದು ಸಭೆಯವರೆಲ್ಲ ತುಂಬ ಹೆದರಿದರು. ಕೂಡಲೇ ಅವನ ತಲೆ ಹಾರಿಸಬೇಕೆಂಬಷ್ಟು ಕೋಪವೂ ಕೆಲವರಿಗೆ ಬಂತು. ಆದರೆ ರಾಜನಲ್ಲಿ ಒಂದಿಷ್ಟೂ ಭಾವಚಲನೆಯಾಗಲಿಲ್ಲ. ಅವನು ಕುರುಬನೊಂದಿಗೆ ಶಾಂತ ಸ್ವರದಿಂದ, "ಹೌದು ಹೌದು, ನಿನ್ನ ಸಂದೇಹ ಸರಿಯಾದುದೇ. ಒಂದೊಂದು ಸಾರಿ ಪರಿಸ್ಥಿತಿ ಅನುಕೂಲವಾಗದೇ ಹೋದಾಗ, ಎಂತಹ ಶಕ್ತಿವಂತನಿಗಾದರೂ ಹೀಗಾಗಿ ಬಿಡುತ್ತದೆ. ಈ ದೇಶದ ರಾಜನನ್ನು ಪ್ರಾಣಾಪಾಯದಿಂದ ಕಾಪಾಡುವಂತಹ ಸಂದರ್ಭ ನಿನಗೆ ಬಂದುದು ನಿನ್ನ ಅದೃಷ್ಟ. ಅದಕ್ಕಾಗಿ ಕೃತಜ್ಞತೆಯಿಂದ ನಾನು ಮಾಡುವ ಸನ್ಮಾನವನ್ನು ತೆಗೆದುಕೋ." ಎಂದು ನಗುತ್ತಾ ಹೇಳಿ, ರಾಜನು ಅವನಿಗೆ ಸಾವಿರ ಚಿನ್ನದ ನಾಣ್ಯಗಳನ್ನು ಬಹುಮಾನವಾಗಿ ಕೊಡಿಸಿದನು.

ಅಷ್ಟೊಂದು ಚಿನ್ನದ ನಾಣ್ಯಗಳನ್ನು ನೋಡಿ ವಿಸ್ಮಿತನಾದ ಕುರುಬನಿಗೆ ಬಾಯಿಯಿಂದ ಮಾತೇ ಹೊರಡಲಿಲ್ಲ. "ಇದಿಷ್ಟೂ ನನಗೇನಾ!" ಎಂದು ತನ್ನ ಸಂದೇಹ ಪರಿಹರಿಸಿಕೊಂಡು, ಹೊರಡುವ ಮೊದಲು ರಾಜನನ್ನು ನೋಡಿ, "ಇನ್ನು ಮೇಲೆ ನೀವು ಊರೂರು ತಿರುಗಾಡುವಾಗ ಬಹಳ ಎಚ್ಚರದಿಂದ ನಡೆದುಕೊಳ್ಳಿ ಸ್ವಾಮಿ. ನನಗೆ ತುಂಬಾ ಕೆಲಸಗಳಿರುತ್ತವೆ. ಬೇಕೆನಿಸಿದಾಗೆಲ್ಲ ಬಂದು ನಿಮ್ಮನ್ನು ಕಾಪಾಡಲಿಕ್ಕೆ ನನಗಾಗಲಿಕ್ಕಿಲ್ಲ ಮತ್ತೆ" ಎಂದನು.

ಈ ಮಾತನ್ನು ಕೇಳಿ ರಾಜನು ಗಟ್ಟಿಯಾಗಿ ನಕ್ಕನು. ತಮ್ಮ ರಾಜನ ಸಹನಶಕ್ತಿಯನ್ನು ನೋಡಿ ಸಭಿಕರಿಗೆಲ್ಲಾ ಆಶ್ಚರ್ಯವಾಯಿತು.

ಈ ಸಂಘಟನೆ ನಡೆದಂದಿನಿಂದ ಆಸ್ಥಾನದಲ್ಲಿದ್ದ ಧನಂಜಯನೆಂಬ ಪಂಡಿತನಿಗೆ ಮನಸ್ಸಿನೊಳಗೆ ಒಂದು ವಿಧವಾದ ನೋವು ಕಾಣಿಸಿತು. ರಾಜನು ಯಾವನೋ ಒಬ್ಬ ಕುರುಬನನ್ನು ಆದರಿಸಿ ಸನ್ಮಾನಮಾಡಿದು ದೇನೋ ಸರಿಯೇ, ಅರ್ಥಮಾಡಿಕೊಳ್ಳಬಹುದು. ಆದರೆ ಅನಾಗರಿಕನೊಬ್ಬನು ಬಹಿರಂಗ ಸಭೆಯಲ್ಲಿ ರಾಜನನ್ನು ಅಷ್ಟೊಂದು ಹಗುರುಮಾಡಿ ಮಾತಾಡಿದು ದನ್ನು ರಾಜನು ಹೇಗೆ ಸಹಿಸಿಕೊಂಡನು ? ಅಂತಹ ರಾಜನು ತನಗೆ ಕೊಡುವ ಗೌರವಕ್ಕೆ ಏನು ಬೆಲೆಯಿದೆ?

ರಾಜನ ದೃಷ್ಟಿಯಲ್ಲಿ ಆ ಕುರುಬನಿಗಿರುವ ಬೆಲೆ ತನಗೂ ಇದೆಯೋ ಇಲ್ಲವೋ ? ಇದನ್ನು ತಿಳಿಯದೆ ಬಿಡಬಾರದೆಂದು ಧನಂಜಯನು ಒಳಗೊಳಗೇ ಕುದಿಯತೊಡಗಿದನು. ಅವನು ತಕ್ಕ ಸಂದರ್ಭಕ್ಕಾಗಿ ಕಾಯುವಾಗ, ಸಭೆಯಲ್ಲಿ ಯಾವುದೋ ಒಂದು ಚರ್ಚೆ ಬಂದಿತು. ತನ್ನ ಅನುಮಾನವನ್ನು ತೀರಿಸಿಕೊಳ್ಳಲು ಧನಂಜಯನಿಗೆ ಅವಕಾಶ ಸಿಕ್ಕಿತು. ರಾಜನು ಒಂದು ಸಂದೇಹವನ್ನು ಹೊರಗೆಡವಿದ ಮೇಲೆ, ಧನಂಜಯನು, "ಇದೆಂಥ ದೊಡ್ಡ ಸಂದೇಹ? ಶತಮೂರ್ಖನಿಗೆ ಕೂಡಾ ಬರಲಾರದ ಈ ಸಂದೇಹವು ರಾಜ್ಯಪಾಲನೆ ಮಾಡುವ ನಿಮಗೆ ಹೇಗೆ ಬಂತೋ ಆಶ್ಚರ್ಯವಾಗಿದೆ!" ಎಂದು ಹೇಳಿಬಿಟ್ಟನು.

ಅದನ್ನು ಕೇಳಿ ರಾಜನಲ್ಲಿ ಉಂಟಾದ ಬದಲಾ ವಣೆಗೆ ಇಡೀ ಸಭೆಯೇ ಬೆದರಿತು. ಅವನ ಕಣ್ಣು ಗಳಿಂದ ಕಿಡಿಗಳುದುರಿದುವು. ಮುಖವು ಕೆಂಪು ಕೆಂಡ ವಾಯಿತು. ಆ ಕೂಡಲೇ ರಾಜನು ಸಭೆಯನ್ನು ಮುಗಿಸಿ ಎದ್ದು ಹೋಗಿಬಿಟ್ಟನು.

ಮರು ದಿನ ಧನಂಜಯನಿಗೆ ಆಸ್ಥಾನ ಪಂಡಿತ ಪದವಿಯಿಂದ ಉದ್ವಾಸನೆಯೂ ಆಯಿತು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ಈಗ ಹೇಳು ಮಹಾರಾಜಾ. ಚಂದ್ರಗಿರಿ ರಾಜನ ಪ್ರವರ್ತ ನೆಗೆ ಅರ್ಥವಿದೆಯೆ ? ಕುರುಬನೊಬ್ಬ ಅವನನ್ನು



ನೇರಾಗಿ ಮೊರಟು ಮಾತುಗಳಿಂದ ಅವಮಾನ ಪಡಿಸಿದರೆ, ಸಿಟ್ಟುಗೊಳ್ಳುವುದಕ್ಕೆ ಬದಲಾಗಿ ಆನಂದಿಸಿದ್ದಾನೆ. ತನ್ನ ಗೌರವಕ್ಕೆ ತುಂಬಾ ಪಾತ್ರನಾದ ಆಸ್ಥಾನದ ದೊಡ್ಡ ಪಂಡಿತನೊಬ್ಬ ಮಾತಿನ ಸಂದರ್ಭದಲ್ಲಿ ದೂಷಣೆ ಸ್ಫುರಿಸುವಂತೆ ಹೇಳಿದುದಕ್ಕೆ ಅಷ್ಟೊಂದು ಕೋಪವನ್ನು ತೋರಿಸಿ, ಶಿಕ್ಷೆಯನ್ನೂ ಕೊಟ್ಟನಲ್ಲ ? ಕಾರಣವೇನು ? ಇದಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಸಾವಿರ ಹೋಳಾಗುತ್ತದೆ!" ಎಂದು ಸಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ರಾಜನ ಪ್ರವರ್ತನೆಗೆ ಅನೇಕ ಸಮರ್ಥನೆಗಳಿವೆ. ಮೊದಲನೆಯದಾಗಿ, ಪ್ರಾಣದಾತನು ತಂದೆಗೆ ಸಮಾನನು. ಅವನಿಗೆ ಹೀಯಾಳಿಸುವ ಹಕ್ಕು ಇರುತ್ತದೆ. ಕುರುಬನು ರಾಜನನ್ನು ತಾನು ಅವಮಾನ ಪಡಿಸುತ್ತೇನೆಂದು ಕೊಳ್ಳಲಿಲ್ಲ. ಅದರ ಮೇಲೆ ಅವನ ಮಾತಿನಲ್ಲಿ ಹಾಸ್ಯವು ಅಡಕವಾಗಿದ್ದಿತು. ಸಭಿಕರ ಮಧ್ಯದಲ್ಲಿ ರಾಜನನ್ನು ಹಗುರಮಾಡಿ ಮಾತಾಡುವ ಅಧಿಕಾರವು ಹಾಸ್ಯಗಾರನಿಗಿದೆ. ಆ ವಿಧದಲ್ಲಿ ಕೂಡಾ ಕುರುಬನು ನ್ಯಾಯದೃಷ್ಟಿಗೆ ಸಮರ್ಥನೆನಿಸುತ್ತಾನೆ. ಮೂರನೇದಾಗಿ, ರಾಜ ಸಭೆಯನ್ನೂ, ರಾಜನನ್ನೂ ನೋಡಿ ಆಶ್ಚರ್ಯದಿಂದ ಅವನ ಬುದ್ಧಿ ಮಂಕಾಗಿತ್ತು. ಹೇಗೆ ಪ್ರವರ್ತಿಸಬೇಕೆಂದು ಅವನಿಗೆ ಗೊತ್ತಿಲ್ಲ. ಸಾಧ್ಯವಾದಷ್ಟು ಸಹಜವಾಗಿ ಪ್ರವರ್ತಿಸಬೇಕೆಂದು ಪ್ರಯತ್ನಿಸಿದ್ದಾನೆ. ಅನಾಗರಿಕನಾದ ಅವನ ಸಹಜ ಪ್ರವರ್ತನೆ ಸ್ವಲ್ಪ ಮೊರಟುತನವಾಗಿಯೇ ಇರುತ್ತದೆ. ಜೀವ ಉಳಿಸಿದ್ದಕ್ಕೆ ತನಗೆ ಸನ್ಮಾನಮಾಡಬೇಕೆಂದು ಅವನೇನೂ ಬಯಸಿರಲಿಲ್ಲ. ತಾನು ಸನ್ಮಾನ ಮಾಡಲ್ಪಡುವವನು ನಾಗರಿಕನ ಹಾಗೆ ಪ್ರವರ್ತಿಸಬೇಕೆಂದು ರಾಜನು ಭಾವಿಸಿದ್ದರೆ ಅದು ನ್ಯಾಯವೆನಿಸಲಾರದು. ಇನ್ನು ಕೊನೆಯದಾಗಿ ಸಾಧಾರಣನಾದ ಒಬ್ಬ ಕುರುಬನ ಮಾತಿಗೆ ಯಾರೂ ಯಾವ ಬೆಲೆಯನ್ನೂ ಕೊಡಲಾರರು. ಅವನ ಮಾತುಗಳಿಂದ ಸಭಿಕರಾರಿಗೂ ರಾಜನ ಮೇಲಿದ್ದ ಅಭಿಪ್ರಾಯಗಳು ಬದಲಾಯಿಸಲಾರವು. ಅವರಲ್ಲಿ ಕೆಲವರಿಗೆ ಕುರುಬನ ಮೇಲೆ ಸಿಟ್ಟುಕೂಡಾ ಬಂತು. ಆದರೆ ಆಸ್ಥಾನ ಪಂಡಿತನ ಮಾತಿಗೆ ಎಲ್ಲರೂ ಬೆಲೆ ಕೊಡುತ್ತಾರೆ. ಮಾತಿನ ಸರಳಿಯಲ್ಲೇ ಆದರೂ ಧನಂಜಯನು ರಾಜನನ್ನು ಅವಮಾನಿಸಿದ್ದಾನೆ. ರಾಜನು ಅದನ್ನು ಸಹಿಸಿಕೊಂಡನಾದರೆ, ಮರು ದಿನದಿಂದ ಸಭಿಕರಲ್ಲಿ ರಾಜನ ಮೇಲೆ ಗೌರವ ಉಳಿಯಲಾರದು. ಆದುದರಿಂದ ರಾಜನು ಅವನನ್ನು ಆಸ್ಥಾನದಿಂದ ತೆಗೆದುಹಾಕುವಂತಹ ಶಿಕ್ಷೆ ವಿಧಿಸಿದುದು ನ್ಯಾಯವೇ."

ಈ ವಿಧವಾಗಿ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯನ್ನು ಸೇರಿತು.





# ವಿಲಕ್ಷಣ ವಿದ್ವಾಂಸ

ಅನೇಕ ವರ್ಷಗಳ ಹಿಂದೆ ಸಿಂಧು ದೇಶವನ್ನು ಜಯ ಸಿಂಹನೆಂಬ ರಾಜನು ಪಾಲಿಸಿಕೊಂಡಿದ್ದನು. ಬೇರೆ ಬೇರೆ ಬಗೆಯ ಪಂಡಿತರೂ ವಿದ್ವಾಂಸರೂ ಅವನ ಆಸ್ಥಾನವನ್ನು ಅಲಂಕರಿಸಿಕೊಂಡಿದ್ದರು.

ಒಂದು ದಿನ ಅವನ ಆಸ್ಥಾನಕ್ಕೆ ಒಬ್ಬ ಸಂಗೀತ ವಿದ್ವಾಂಸನು ಬಂದು ತಾನು ಯಾರೆಂಬುದನ್ನು ಹೇಳಿ, ತನ್ನನ್ನು ಆಸ್ಥಾನ ಸಂಗೀತ ವಿದ್ವಾಂಸರ ಪಂಕ್ತಿಯಲ್ಲಿ ಸೇರಿಸಿಕೊಳ್ಳಬೇಕೆಂದು ಕೇಳಿಕೊಂಡನು.

ಅದಕ್ಕೆ ಜಯಸಿಂಹರಾಜನು, "ನಮ್ಮ ಆಸ್ಥಾನ ದಲ್ಲಿ ಅನೇಕ ಮಂದಿ ಸಂಗೀತ ವಿದ್ವಾಂಸರಿದ್ದಾರೆ. ಆದುದರಿಂದ ಹೊಸಬರನ್ನು ಸೇರಿಸಿಕೊಳ್ಳುವ ಆಲೋಚನೆ ಪ್ರಸ್ತುತ ಇಲ್ಲ" ಎಂದನು.

ವಿದ್ವಾಂಸನು ಆ ದಿನ ಹೊರಟುಹೋದನು. ಹೋದವನು ಮರು ದಿನ ಆ ರಾಜನ ಸಭೆಗೆ ಪುನಃ ಬಂದು, "ನಾನೊಬ್ಬ ಸಂಗೀತ ವಿದ್ವಾಂಸ. ನಿಮ್ಮ ಆಸ್ಥಾನದಲ್ಲಿ ಆಶ್ರಯ ಪಡೆಯಬೇಕೆಂದು ಬಂದಿದ್ದೇನೆ" ಎಂದು ಮೊದಲನೇ ದಿನ ಹೇಳಿದಂತೆಯೇ ರಾಜನನ್ನು ಕೇಳಿಕೊಂಡನು. "ನಮ್ಮ ಆಸ್ಥಾನದಲ್ಲಿ ಈಗ ಸಂಗೀತ ವಿದ್ವಾಂಸರ ಅಗತ್ಯವಿಲ್ಲ. ನೀವು ಬೇರಲ್ಲಿಗಾದರೂ ಹೋಗಬಹುದು." ಎಂದು ಕಳುಹಿಸಿಬಿಟ್ಟನು ಜಯ ಸಿಂಹ ರಾಜ. ಆದರೆ ಆ ವಿದ್ವಾಂಸನು ದಿನಾ ಆ ರಾಜನ ಸಭೆಗೆ ಬಂದು, ಆಗಲೇ ಪ್ರಥಮ ಬಾರಿ ಬಂದವನಂತೆ ರಾಜನೊಂದಿಗೆ ತನ್ನ ಪರಿಚಯವನ್ನೂ, ಕೋರಿಕೆಯನ್ನೂ ಹೇಳಿಕೊಂಡು ಬಂದನು. ರಾಜನು ಅವನ ಕೋರಿಕೆಯನ್ನು ಸಹನೆ, ಶಾಂತತೆ, ಸಾವಧಾನ ಗಳಿಂದಲೇ ನಿರಾಕರಿಸಿಕೊಂಡೇ ಇದ್ದನು.

ಹೀಗೆ ಅನೇಕ ದಿನಗಳು ಕಳೆದ ಮೇಲೆ ರಾಜನಿಗೆ ಆ ಸಂಗೀತ ವಿದ್ವಾಂಸನ ವಿಷಯದಲ್ಲಿ ತನ್ನ ಪ್ರವರ್ತನೆ ಅವಮಾನಕರವಾಗಿರುವಂತೆ ತೋರಿತು. ಏಕೆಂದರೆ ಆ ಸಂಗೀತ ವಿದ್ವಾಂಸನ ಮುಖದಲ್ಲಿ ವಿದ್ವತ್‌ಕಳೆಯ ತೇಜಸ್ಸು ಹರಡಿಕೊಂಡಿದ್ದಿತು. ತನ್ನ ಆಸ್ಥಾನದಲ್ಲಿ ಸಂಗೀತ ವಿದ್ವಾಂಸನಾಗಿರಬೇಕೆಂದು ಆತನು ಅಷ್ಟೊಂದು ಸಹನೆಯಿಂದ ಕೇಳುತ್ತಿರುವಾಗ, ಅವ ನೇನೋ ಅರ್ಧರಾಜ್ಯವನ್ನೇ ಕೇಳಲು ಬಂದವನಂತೆ, ತಾನು ನಿರಾಕರಿಸುವುದು ಅಸಹ್ಯವೆನಿಸಿತು.

ಆದುದರಿಂದ ಒಂದು ದಿನ ಆ ವಿದ್ವಾಂಸನು ಬಂದು ತನ್ನ ಕೋರಿಕೆಯನ್ನು ಹೊರಪಡಿಸಿದಾಗ ಜಯಸಿಂಹನು, "ಒಳ್ಳೆಯದು, ನೀವು ಇಷ್ಟೊಂದು

ಡಿ. ಟಿ. ಶೇಷಗಿರಿರಾವ್

ಕೇಳುವಿರಾದುದರಿಂದ, ನಿಮ್ಮ ಗಾಯನವನ್ನು ನಮ್ಮ ವಿದ್ವಾಂಸರ ಮುಂದೆ ಹಾಡಿತೋರಿಸಿರಿ. ಅವರು ಒಪ್ಪಿಕೊಂಡರೆ ನಿಮ್ಮನ್ನು ಆಸ್ಥಾನವಿದ್ವಾಂಸರಲ್ಲಿ ಒಬ್ಬರಾಗಿ ಸೇರಿಸಿಕೊಳ್ಳುತ್ತೇನೆ" ಎಂದನು.

"ಆ ವಿಷಯದಲ್ಲಿ ನನ್ನದೊಂದು ನಿಯಮವಿದೆ ಮಹಾರಾಜಾ. ನಾನು ನನಗೆ ಇಷ್ಟವೆನಿಸಿದಾಗ ಮಾತ್ರವೇ ಗಾಯನ ಮಾಡುವವನು. ಒಬ್ಬರು ಕೇಳಿಕೊಂಡಾಗ ಗಾಯನಮಾಡಲಾರೆ. ಇದು ತಮಗೆ ಪೂರ್ತಿ ಸಮ್ಮತವಾದರೇನೇ ನನ್ನನ್ನು ತಮ್ಮ ಆಸ್ಥಾನ ದಲ್ಲಿ ಸೇರಿಸಿಕೊಳ್ಳಿರಿ." ಎಂದನು ಸಂಗೀತ ವಿದ್ವಾಂಸ.

ಇದೇನೋ ಠೇಂಕಾರದ ಮಾತಿನಂತೆ ಭಾಸವಾಗಿ ರಾಜನಿಗೆ ಕೋಪ ಬಂದಿತು. "ಇಂತಹ ನಿಯಮ ವಿಟ್ಟುಕೊಂಡಿರುವ ವಿದ್ವಾಂಸರಿಗೆ ನನ್ನ ಆಸ್ಥಾನದಲ್ಲಿ ಸ್ಥಳವಿಲ್ಲ." ಎಂದನು ಪರುಷವಾಗಿ.

ವಿದ್ವಾಂಸನು ಆ ದಿನ ಹೊರಟುಹೋದನು. ಆದರೆ ಮರುದಿನ ಮತ್ತೆ ಬಂದು, ತನ್ನ ಕೋರಿಕೆ ಯನ್ನೂ ನಿಯಮವನ್ನೂ ಹೇಳಿ ಆಶ್ರಯ ಕೇಳಿದನು. ರಾಜನು ಅವನ ಮಾತಿಗೆ ಸಮ್ಮತಿಸದೆ ನಿರಾಕರಿಸಿದನು. ಹೀಗೆ ಅವನು ಮತ್ತೆ ಮತ್ತೆ ಬರುವುದೂ ರಾಜನು ನಿರಾಕರಿಸುವುದೂ ಸ್ವಲ್ಪ ದಿನ ನಡೆಯಿತು. ಆಗ ಜಯಸಿಂಹನಲ್ಲಿ ಅಕಸ್ಮಾತ್ತಾಗಿ ಒಂದು ಆಲೋಚನೆ ಯುಂಟಾಯಿತು. ಆ ವಿದ್ವಾಂಸನ ಮನಸ್ಸಿನಲ್ಲಿ ಏನೋ ಒಂದು ಉದ್ದೇಶ ಹುದುಗಿರಬೇಕು. ಅವನು ಶಾಶ್ವತವಾಗಿ ಇಲ್ಲಿಗೆ ಬಾರದಂತೆ ಮಾಡುವುದೇನೂ ದೊಡ್ಡ ಕೆಲಸವಲ್ಲ. ಹಾಗೆ ಮಾಡಿದರೆ ಅವನ ಮನಸ್ಸಿ ನೊಳಗೆ ಏನಿರುವುದುದೆಂದು ತಿಳಿಯದು.

ಹೀಗಂದುಕೊಂಡು ಒಂದು ದಿನ ರಾಜನು ಅಕಸ್ಮಾತ್ತಾಗಿ, ಸಭಿಕರೆಲ್ಲರೂ ವಿಸ್ಮಿತರಾಗುವಂತೆ, ಆ ವಿದ್ವಾಂಸನನ್ನು ನೋಡಿ, "ಒಳ್ಳೆಯದು. ಈ ದಿನ ದಿಂದ ನಿಮ್ಮ ಕೋರಿಕೆಯನ್ನೂ, ನಿಯಮವನ್ನೂ ಆಮೋದಿಸಿ ಆಸ್ಥಾನ ವಿದ್ವಾಂಸ ಪದವಿಯಲ್ಲಿರಿಸಿ ಬಿಡುತ್ತೇನೆ. ನಿಮಗೆ ನಿವಾಸ ಸ್ಥಾನವನ್ನೂ, ವೇತನ ವನ್ನೂ, ಇತರ ಸದುಪಾಯಗಳನ್ನೂ ಏರ್ಪಡಿಸಿ ಕೊಡುತ್ತೇನೆ" ಎಂದನು.



ರಾಜನ ಮಾತು ಕೇಳಿ ಎಲ್ಲರೂ ಆಶ್ಚರ್ಯ ಪಟ್ಟರೂ, ಆ ವಿದ್ವಾಂಸನು ಮಾತ್ರ ಸ್ವಲ್ಪವೂ ಆಶ್ಚರ್ಯಪಡಲಿಲ್ಲ. ಅವನು ಕೃತಕೃತ್ಯನಾದವನಂತೆ ಆ ದಿನವೇ ರಾಜನ ಆಸ್ಥಾನದಲ್ಲಿ ಸೇರಿಕೊಂಡನು.

ರಾಜನು ಮಾಡಿದ ಈ ಕೆಲಸವು ಸಭೆಯಲ್ಲಿ ಯಾರಿಗೂ ಹಿಡಿಸಲಿಲ್ಲ. ಈ ಹೊಸ ಸಂಗೀತ ವಿದ್ವಾಂಸನು ಅಪರ ನಾರದನೇನೋ ಅಂದುಕೊಂಡು ತಮ್ಮ ಅತೃಪ್ತಿಯನ್ನು ಸಮಾಧಾನಪಡಿಸಿಕೊಂಡರು. ಆಮೇಲೆ ತಿಂಗಳುಗಳ ಮೇಲೆ ತಿಂಗಳು ಕಳೆಯುತ್ತಿದ್ದರೂ, ಆ ಹೊಸ ವಿದ್ವಾಂಸನು ಹಾಡುವ ಗೊಡವೆಗೇ ಹೋಗಲಿಲ್ಲ.

ಮುಂದೆ ರಾಜನಿಗೆ ಪುತ್ರೋದಯವಾಯಿತು. ಭಾವೀ ರಾಜನು ಹುಟ್ಟಿದನೆಂದು ದೇಶದೊಳಗೆಲ್ಲಾ ಪ್ರಜೆಗಳು ಬಗೆಬಗೆಯ ಉತ್ಸವಗಳನ್ನು ನಡೆಯಿಸಿದರು. ರಾಜಭವನದಲ್ಲಿ ಹತ್ತು ದಿನಗಳವರೆಗೆ ನೃತ್ಯಗಾನ ವಿನೋದಗೋಷ್ಠಿಗಳು ನಡೆದುವು. ಆಸ್ಥಾನ ಸಂಗೀತ ವಿದ್ವಾಂಸರೂ ಇತರ ವಿದ್ವಾಂಸರೂ ತಮ್ಮ ತಮ್ಮ ವಿದ್ಯೆಗಳನ್ನು ಪ್ರದರ್ಶನ ಮಾಡಿದರು. ಹೊಸ ವಿದ್ವಾಂಸನು ಮಾತ್ರ ಹಾಡಲೇ ಇಲ್ಲ. ಅದನ್ನು ಗಮನಿಸಿ ರಾಜನ ಮನಸ್ಸು ಚಿವುಕ್ಕನ್ನತೊಡಗಿತು. "ನೀವು ಕೂಡಾ ಹಾಡಬಾರದೇನು?" ಎಂದು ಇತರರಿಂದ ಕೇಳಿಸಿದಾಗ ಆತನು ಮಾತೇ ಆಡಲಿಲ್ಲ. ಕಡೆಗೆ ಮಂತ್ರಿಯಿಂದಲೇ ಕೇಳಿಸಿದನು. ಆಗ ವಿದ್ವಾಂಸನು, "ಈಗ ಹಾಡಲಾರೆ. ತಕ್ಕ ಸಮಯ ಬಂದಾಗ ಯಾರೂ ಕೇಳದೆಯೇ ಗಾನಮಾಡುತ್ತೇನೆ" ಎಂದು ಹೇಳಿಬಿಟ್ಟನು.

ಅವನನ್ನು ಪದವಿಯಿಂದ ತೊಲಗಿಸಬೇಕೆಂದು ರಾಜನಿಗೆ ಪದೇ ಪದೇ ತೋರುತ್ತಿದ್ದಿತು. ಆದರೆ ಆ ವಿದ್ವಾಂಸನಲ್ಲಿ ಹುದುಗಿರುವ ಉದ್ದೇಶವನ್ನು ತಿಳಿದು ತೀರಬೇಕಾಗಿತ್ತು, ಅದುವೇ ರಾಜನನ್ನು ನಿಗ್ರಹಿಸಿತ್ತು.

ಐದು ವರ್ಷಗಳು ಉರುಳಿದುವು. ಈ ಕಾಲದಲ್ಲಿ ಒಂದುಸಾರಿ ಕೂಡಾ ಆ ವಿದ್ವಾಂಸನು ಹಾಡಲಿಲ್ಲ.

ಒಂದು ದಿನ ಆಕಸ್ಮಿಕವಾಗಿ ರಾಜಕುಮಾರನಿಗೆ ಏನೋ ವಿಷಜ್ವರವು ಪ್ರಾರಂಭವಾಯಿತು. ಎಷ್ಟೋ



ವೈದ್ಯರು ಏನೇನೋ ಔಷಧಿಗಳನ್ನು ಕೊಡುತ್ತಿದ್ದರೂ ರೋಗವು ಹೆಚ್ಚುತ್ತಾಹೋಯಿತು. ಕಡೆಗೆ ಬದುಕುವ ನಂಬ ಆಶೆ ಬಿಡುವ ಸ್ಥಿತಿಗೆ ಬಂದಿತು. ರಾಜಕುಮಾರನ ಪ್ರಾಣವು ಯಾವ ಕ್ಷಣದಲ್ಲಿ ಹೋಗುವುದೋ ಎಂಬಂತಾಗಿ, ಎಲ್ಲರೂ ಅವನ ಮರಣಶಯ್ಯೆಯ ಸುತ್ತಲೂ ಕೂಡಿದ್ದರು.

ಸರಿಯಾಗಿ ಆ ಸಮಯದಲ್ಲಿ ಅದುವರೆಗೂ ಹಾಡದಿದ್ದ ಆ ವಿಲಕ್ಷಣ ಸಂಗೀತ ವಿದ್ವಾಂಸನು ತನ್ನ ವೀಣೆಯೊಂದಿಗೆ ಬಂದು, ಅಲ್ಲಿಯೇ ಒಂದು ಬದಿಯಲ್ಲಿ ಕುಳಿತು ಗಾಯನವನ್ನು ಪ್ರಾರಂಭಿಸಿದನು.

ಅದನ್ನು ನೋಡಿದವರು, " ಛೀ ಛೀ ! ಈ ವರೆಗೂ ಹಾಡದವನಿಗೆ ಈಗ ಸಮಯ ಬಂದಿತೇನು ? ರಾಜಕುಮಾರನ ಜನನವಾದ ಕಾಲಕ್ಕೆ ಹಾಡಲಾಗ ದವನು, ಅವನ ಮರಣಕಾಲ ಬಂದಾಗ, ಈ ಆಖೈರು ವೇಳೆಯಲ್ಲಿ ಸಾಯುವವನಿಗೆ ಸಂಗೀತ ಕೇಳಿಸುವು ದೆಂದರೆ ಏನಿದು ವಿಪರೀತ ! " ಎಂದು ಬಗೆಬಗೆಯಾಗಿ ರಹಸ್ಯವಾಗಿ ವಿಮರ್ಶಿಸಿಕೊಳ್ಳತೊಡಗಿ, ಹಾಗೆಯೇ ಮೈಮರೆತರು ; ಗಪ್‌ಚಿಪ್ಪಾದರು.

ಆ ವಿದ್ವಾಂಸನ ಹಾಡು ಯಾರೂ ಈವರೆಗೂ ಕೇಳದಂತಹ ಮಧುರರಸ ವಾಹಿನಿಯಂತಿದ್ದಿತು. ಅದು ಎಲ್ಲರಲ್ಲಿಯೂ ಮತ್ತಿನ ಮಯಕವನ್ನುಂಟು ಮಾಡಿತು. ಅವರೆಲ್ಲ ರಾಜಕುಮಾರನ ರೋಗವನ್ನೂ, ಬರಲಿರುವ ಅವನ ಸಾವನ್ನೂ ಮರೆತು ಹೋಗಿ ಬಿಟ್ಟರು. ತಾವೆಲ್ಲ ಎಲ್ಲಿದ್ದೇವೆಂಬುದೂ ಮರೆತು ಹೋಯಿತು ಎಲ್ಲರಿಗೂ.

ಜಯಸಿಂಹರಾಜನು ಫಕ್ಕನೆ ಎಚ್ಚರ ಬಂದವನ ಹಾಗೆ ಮಗನು ಮಲಗಿದ್ದ ಮಂಚದ ಕಡೆಗೆ ನೋಡಿ ದನು. ಆ ಮರಣಶಯ್ಯೆ ಖಾಲಿಯಾಗಿತ್ತು ! ರಾಜನು ಮತ್ತಷ್ಟು ಆಂದೋಳನೆಯಿಂದ ಸುತ್ತಲೂ ಇರುವ ವರ ಕಡೆಗೆ ನೋಡಿದನು. ಏನಾಶ್ಚರ್ಯ ! ರಾಜ ಕುಮಾರನು ಎಲ್ಲರ ಜತೆಯಲ್ಲಿ ಎಲ್ಲರ ಹಾಗೆ ಕುಳಿತು ಕೊಂಡು ಸಂಗೀತವನ್ನು ಕೇಳುತ್ತಿದ್ದಾನೆ ! ಇದ್ದಕ್ಕಿದ್ದ ಹಾಗೆ ಸಂಗೀತ ನಿಂತು ಹೋಯಿತು. ವಿದ್ವಾಂಸನು ತನ್ನ ವೀಣೆಯನ್ನು ತೆಗೆದುಕೊಂಡು ಹೊರಗೆ ನಡೆದನು.

ರಾಜಕುಮಾರನು ಸತ್ತು ಬದುಕಿದುದನ್ನು ಎಲ್ಲರೂ ನೋಡಿದರು. ಅವನಲ್ಲಿ ಸ್ವಲ್ಪವೂ ರೋಗಲಕ್ಷಣ ಗಳಿರಲಿಲ್ಲ. ಅದನ್ನು ನೋಡಿ ಸಂತೋಷಾಶ್ಚರ್ಯ ಗಳಲ್ಲಿರುವವರಿಗೆ, ಸಂಗೀತ ವಿದ್ವಾಂಸನ ಕಡೆಗೆ ಆಲೋಚನೆ ಹೋಗಲೇ ಇಲ್ಲ.

ಆಮೇಲೆ ರಾಜನು ಆ ವಿದ್ವಾಂಸನ ಅದ್ಭುತ ಪ್ರಭಾವವನ್ನು ನೆನೆದು, ಅವನಿಗೆ ದೊಡ್ಡ ಜಾಗೀ ರನ್ನು ಕೊಟ್ಟು ಸನ್ಮಾನ ಮಾಡಬೇಕೆಂದುಕೊಂಡನು. ಆದರೆ ಆ ವಿದ್ವಾಂಸನು ಏನಾದನೋ ಎಲ್ಲಿಗೆ ಹೋದನೋ ಯಾರಿಗೂ ತಿಳಿಯಲಿಲ್ಲ.





# ದೊಡ್ಡಸ್ತಿಕೆ ಎಲ್ಲಿದೆ?

ಅವಂತೀ ರಾಜನ ಅರಮನೆಯ ಆಶ್ರಯದಲ್ಲಿ ವಿನೋದನೆಂಬವನು ಚಿಕ್ಕದೊಂದು ಉದ್ಯೋಗದಲ್ಲಿ ಸೇರಿಕೊಂಡಿದ್ದನು. ಅವನ ತಂದೆ ಮಹಾರಾಜನ ಅರಮನೆಯ ವಿಭಾಗದಲ್ಲಿ ಉದ್ಯೋಗಸ್ಥನಾಗಿದ್ದು ತೀರಿಹೋದ ಮೇಲೆ, ಅದೇ ಉದ್ಯೋಗವು ವಿನೋದನಿಗೂ ಸಿಕ್ಕಿತು. ಅವನಿಗೆ ಆ ಉದ್ಯೋಗವು ತೃಪ್ತಿಕರವಾಗಿರಲಿಲ್ಲ. ತಾನು ಅರಮನೆಯಲ್ಲಿ ದೊಡ್ಡದೊಂದು ಅಧಿಕಾರಿಯ ಉದ್ಯೋಗದಲ್ಲಿದ್ದು, ಬರಲಿರುವ ತನ್ನ ಹೆಂಡತಿಯ ದೃಷ್ಟಿಯಲ್ಲಿ ದೊಡ್ಡ ಮನುಷ್ಯನಾಗಿ ಕಾಣಬೇಕೆಂಬುದು ಅವನ ಉದ್ದೇಶವಾಗಿತ್ತು. ಅಂತಲೇ ಮದುವೆಯಾಗದಿದ್ದನು. ಕಡೆಗೆ ಅವನ ತಾಯಿಯ ಒತ್ತಾಯದಿಂದ ಬಡ ರೈತನೊಬ್ಬನ ಮಗಳು ಚಂದ್ರಾ ಎಂಬವಳು ಅವನಿಗೆ ಹೆಂಡತಿಯಾಗಿ ಬಂದಳು. ಅವಳು ಸುಂದರಿಯಾಗಿದ್ದುದು ಮಾತ್ರವಲ್ಲದೆ, ಬಡ ಕುಟುಂಬದಿಂದ ಬಂದವಳಾದುದರಿಂದ, ಮಿತತನದವಳೂ, ಇತರರಿಗೆ ಮರ್ಯಾದೆ ತೋರಿಸುವವಳೂ, ಮಿತಭಾಷಿಣಿಯೂ ಆಗಿದ್ದಳು. ಗಂಡನ ಬಳಿಯಲ್ಲಿಯೂ, ಅತ್ತೆಯ ಮುಂದೆಯೂ ವಿನಯವಿಧೇಯತೆಗಳಿಂದ ನಡೆದುಕೊಳ್ಳುತಿದ್ದಳು.

ಆದರೆ ವಿನೋದನು ಹೆಂಡತಿಯ ಮುಂದೆ ದೊಡ್ಡಸ್ತಿಕೆ ತೋರಿಸಲು ತುಂಬಾ ಪ್ರಯತ್ನಿಸುತಿದ್ದನು. ವೇಷ ಭೂಷಣ ತಿಂಡಿ ತೀರ್ಥಗಳಿಗಾಗಿ ತುಂಬಾ ಖರ್ಚುಮಾಡುತಿದ್ದನು. ಹೀಗೆಲ್ಲಾ ತಾನು ಹೆಂಡತಿಯನ್ನು ಮೆಚ್ಚಿಸುವೆನೆಂದು ಕೊಳ್ಳುತ್ತ, ಸಾಲದ ಬಲೆಗೂ ಬಿದ್ದನು.

ಚಂದ್ರಳಿಗೆ ತನ್ನ ಗಂಡನ ಸಂಪಾದನೆ ಎಷ್ಟೆಂಬುದು ಗೊತ್ತಿತ್ತು. ಆದರೆ ಅವನು ಧನಿಕನಲ್ಲವೆಂಬ ಸಂಗತಿಯನ್ನು ಪ್ರತ್ಯಕ್ಷವಾಗಿ ಹೇಳಿ ಆಕ್ಷೇಪಿಸದೆ, "ನಮಗೆ ಹೀಗೆಲ್ಲಾ ಖರ್ಚುಮಾಡುವ ಅಗತ್ಯವೇನಿದೆ? ಸಾಧಾರಣವಾಗಿದ್ದರೇ ಸಾಕಲ್ಲ" ಎಂದು ನಯವಾಗಿ ಹೇಳುತ್ತಿದ್ದಳು. ಮಿತವ್ಯಯದಲ್ಲಿರುವುದನ್ನು ಅವಮಾನವೆಂದು ಭಾವಿಸುತ್ತಿದ್ದ ವಿನೋದನು, "ಹಾಗೆಲ್ಲಾ ಜಿಪುಣತನಮಾಡಿ ಬದುಕುವ ಕರ್ಮ ನಮಗೇನು ಬಂದಿದೆ? ನಮ್ಮ ಅಂತಸ್ತಿಗೆ ತಕ್ಕ ಹಾಗೆ ಇರಬೇಡವೇ?" ಎಂದು ಹೆಂಡತಿಯೊಂದಿಗೆ ಹೇಳುವನು.

ಆದರೆ ಅವನನ್ನು ಸಾಲದ ಶೂಲವು ನೋಯಿಸುತ್ತಲೇ ಇದ್ದಿತು. ಅದನ್ನು ಹೇಗೆಹೇಗೋ ಸಹಿಸಿ

**ಬಿ. ಎ. ರಾವ್**



ಕೊಳ್ಳುತ್ತ, ಇದಕ್ಕಿಂತ ಒಳ್ಳೆಯ ಉದ್ಯೋಗಕ್ಕಾಗಿ ಪ್ರಯತ್ನಿಸುತ್ತಲೇ ಇದ್ದನು.

ಹೀಗಿರುವಾಗ ಒಂದುದಿನ ವಿನೋದನ ಸೋದರ ಮಾವ ತಂಗಿಯನ್ನೂ, ಅಳಿಯನನ್ನೂ ನೋಡಲು ಬಂದನು. ಅವನು ರಾಜನ ಆಸ್ಥಾನದಲ್ಲಿ ದೊಡ್ಡ ಅಧಿಕಾರದಲ್ಲಿರುವವನು. ಅವನು ಮನಸ್ಸು ಮಾಡಿದರೆ ತನಗೆ ದೊಡ್ಡ ಉದ್ಯೋಗವನ್ನು ಕೊಡಿಸಬಲ್ಲನೆಂದು ವಿನೋದನಿಗೆ ತೋರಿತು. ಅಂತೆಯೇ ಅವನು ಮಾವನೊಂದಿಗೆ ತನ್ನ ಗೋಳನ್ನು ಹೇಳಿ, ದೊಡ್ಡ ಉದ್ಯೋಗ ಕೊಡಿಸಬೇಕೆಂದು ಕೇಳಿಕೊಂಡನು.

ವಿನೋದನ ಮಾತು ಕೇಳಿ ಅವನ ಮಾವಯ್ಯನಿಗೆ ಆಶ್ಚರ್ಯವಾಯಿತು. ಏಕೆಂದರೆ ವಿನೋದನ ಉದ್ಯೋಗವು ತೀರ ಸಣ್ಣ ಉದ್ಯೋಗವೇನಲ್ಲ. ಅವನಿಗಿರುವ ಅರ್ಹತೆಗೆ ಮೀರಿದ ಉದ್ಯೋಗವೇ ಆಗಿತ್ತು ಅದು. ಅದರಿಂದ ಬರುವ ಸಂಬಳವೂ ಕುಟುಂಬ ಖರ್ಚಿಗೆ ಧಾರಾಳವಾಗಿ ಸಾಲು ವಂತಹುದೇ. ಮನಸ್ಸು ಮಾಡಿದರೆ ಅದರಲ್ಲಿ ಸ್ವಲ್ಪ ಉಳಿತಾಯ ಮಾಡಿಕೊಳ್ಳಲೂ ಬಹುದು. ಅಷ್ಟೇ ಅಲ್ಲದೆ, ಆ ಉದ್ಯೋಗದಲ್ಲಿ ಸಮರ್ಥತೆಯನ್ನು ತೋರಿಸಿದರೆ ಒಳ್ಳೆಯ ಭವಿಷ್ಯತ್ತು ಕೂಡ ಬರುವಂತಹುದು. ಅವನ ತಂದೆ ಮಧ್ಯವಯಸ್ಸು ಮೀರಿದ ಮೇಲೆ ಆ ಉದ್ಯೋಗದಲ್ಲಿದ್ದುಕೊಂಡು ತೀರಿಹೋದವನು. ಇವನಿಗೆ ಇನ್ನೂ ಚಿಕ್ಕವಯಸ್ಸು.

ಇದನ್ನೆಲ್ಲ ತಿಳಿದುಕೊಂಡಿದ್ದ ಮಾವಯ್ಯ ವಿನೋದನ ಅವಿವೇಕಕ್ಕೆ ಕನಿಕರಗೊಂಡು, "ನೋಡು ವಿನೋದಾ, ಮೊದಲು ನಿನ್ನ ಈ ಉದ್ಯೋಗದ ಮೇಲೆ ಒಳ್ಳೆಯ ಗುರಿಯನ್ನೂ ಗೌರವವನ್ನೂ ಇಟ್ಟಿರಬೇಕು. ಆಗ ಆ ಉದ್ಯೋಗದಲ್ಲಿ ನೀನು ಅಭಿವೃದ್ಧಿಗೆ ಬರುತ್ತೀ. ಮೇಲಿನ ಅಧಿಕಾರಿಗಳು ನಿನ್ನ ಪ್ರತಿಭೆಯನ್ನು ಗುರುತಿಸಿದರಾದರೆ, ನಿನಗೆ ಒಳ್ಳೆಯದಾಗುತ್ತದೆ. ಮುಖ್ಯ, ಬರುವಷ್ಟಕ್ಕೆ ತೃಪ್ತಿಯಿಂದಿರಲು ಕಲಿಯಬೇಕು" " ಎಂದು ತಿಳಿಯ ಹೇಳಿದನು.

ವಿನೋದನಿಗೆ ಮಾವಯ್ಯನ ಮಾತುಗಳು ರುಚಿಸ ಲಿಲ್ಲ. ತನಗೆ ಸಹಾಯ ಮಾಡುವ ಮನಸ್ಸಿಲ್ಲದೆ ತಪ್ಪಿಸಿಕೊಳ್ಳಲಿಕ್ಕಾಗಿ ಹೀಗೆಲ್ಲಾ ಹೇಳುತ್ತಾರೆಂದು ಅವನು ತಪ್ಪಾಗಿ ತಿಳಿದುಕೊಂಡನು. ಅವನ ಭಾವನೆಯನ್ನು ಕಂಡುಹಿಡಿದ ಮಾವಯ್ಯ, "ಹಾದೂ, ನೀನು ಎಂತಹ ಉದ್ಯೋಗ ಸಿಕ್ಕಿದರೆ ಒಳ್ಳೆಯದೆಂದುಕೊಳ್ಳುತ್ತೀ ? " ಎಂದು ಕೇಳಿದನು.

ಈ ಪ್ರಶ್ನೆಯಿಂದ ಪನ್ನೀರು ಸಿಂಪಡಿಸಿಕೊಂಡವನಂತೆ ವಿನೋದನಿಗೆ ಸಂತೋಷವಾಗಿ, "ನೋಡಿ ಮಾವಯ್ಯಾ, ಕೋಶಾಧಿಕಾರಿಯ ಪದವಿಯಾಗಲಿ, ಮಂಡಲಾಧಿಕಾರಿಯ ಪದವಿಯಾಗಲಿ, ಅಂತಸ್ತಿಗೂ, ಆದಾಯಕ್ಕೂ ಚೆನ್ನಾಗಿರುತ್ತದೆ" ಎಂದನು.

ಅಳಿಯನ ಎಟಕರಿಸಲಾಗದ ಕೋರಿಕೆಯನ್ನು ಕೇಳಿ, ಮಾವಯ್ಯನಿಗೆ ನಗುವೂ, ಕೋಪವೂ ಬಂದಿತು.

ಅದಾವುದನ್ನೂ ತೋರ್ಪಡಿಸಿಕೊಳ್ಳದೆ, ಏನೋ ಯೋಚಿಸುವಂತೆ ನಟಿಸಿ, " ಸರಿ. ನಾಳೆ ನನ್ನೊಂದಿಗೆ ಬಾ. ಕೋಶಾಧಿಕಾರಿ ನನಗೆ ಗೊತ್ತಿರುವವನೇ. ಆ ಶಾಖೆಯಲ್ಲಿ ಪ್ರಯತ್ನಮಾಡೋಣ " ಎಂದನು.

ಮರುದಿನ ವಿನೋದನು ಮಾವಯ್ಯನ ಜತೆಯಲ್ಲಿ ರಾಜಧಾನಿಗೆ ಹೊರಟನು. ಇಬರೂ ಒಟ್ಟಿಗೆ ಕೋಶಾಧಿಕಾರಿಯ ಬಳಿಗೆ ಹೊರಟರು. ಮಾವಯ್ಯನು ಸ್ವಲ್ಪಹೊತ್ತು ಕೋಶಾಧಿಕಾರಿಯೊಂದಿಗೆ ಏಕಾಂತದಲ್ಲಿ ಮ್ಹಾತಾಡಿದ ಮೇಲೆ, ವಿನೋದನನ್ನು ಕರೆದು ಪರಿಚಯ ಮಾಡಿದನು.

ಕೋಶಾಧಿಕಾರಿ ವಿನೋದನನ್ನು ತಲೆಯಿಂದ ಕಾಲಿನವರೆಗೂ ಏನೋ ಪರೀಕ್ಷಿಸುವಂತೆ ನೋಡಿ, ಅವನು ಮಾಡುವ ಉದ್ಯೋಗವನ್ನು ಕುರಿತು ಕೇಳಿ ತಿಳಿದುಕೊಂಡನು.

ಆಮೇಲೆ ವಿನೋದನೊಂದಿಗೆ, " ಹೌದು. ನಿನ್ನ ಆಶಯವೇನೋ ಒಳ್ಳೆಯದೇ. ಆದರೆ ಈ ಕೋಶಾಧಿಕಾರದಲ್ಲಿ ಕೆಳಗಿನ ಸ್ಥಾನದಲ್ಲಿದ್ದೇ ಮೇಲೆ ಬರಬೇಕಾಗಿದೆ. ಅದು ನೀನು ಭಾವಿಸಿಕೊಂಡಿರುವಷ್ಟು ಸುಲಭವಾದುದೂ ಅಲ್ಲ, ಸುಖವಾದುದೂ ಅಲ್ಲ. ಕತ್ತಿಯ ಮೊನೆಯಲ್ಲಿ ನಡೆಯುವಂಥಾ ಕೆಲಸ. ಧನಾಗಾರದೊಂದಿಗೆ ಸಂಬಂಧವಿರುವ ಕೆಲಸ ಗೊತ್ತಾ ? ಎಲ್ಲಿ ಒಂದಿಷ್ಟು ಹೆಚ್ಚು ಕಡಿಮೆಯಾದರೂ ಈ ವಿಭಾಗದಲ್ಲಿರುವ ಎಲ್ಲರ ತಲೆಗೂ ರಾಜದಂಡನೆ ಬೀಳುತ್ತದೆ. ಈ ವಿಭಾಗದಲ್ಲಿ ಕೆಲಸ ಮಾಡಲಿಕ್ಕೆ ಬರೀ ಬುದ್ಧಿವಂತಿಕೆ ಮಾತ್ರ ಸಾಲದು. ಧೈರ್ಯವೂ ಅನುಭವವೂ ತುಂಬಾ ಬೇಕು " ಎಂದನು.

ವಿನೋದನಿಗೆ ಈ ಮಾತುಗಳು ರುಚಿಸಲಿಲ್ಲ. ಕೋಶಾಧಿಕಾರಿ ಇನ್ನೂ ಮುಂದುವರಿಸಿ ಹೇಳಿದನು : "ನಾನು ಅಕಸ್ಮಾತ್ತಾಗಿ ಒಮ್ಮೆಗೇ ಈ ಪದವಿಗೆ ಬಂದವನಲ್ಲ. ಈ ವಿಭಾಗಕ್ಕೆ ಪ್ರವೇಶಿಸುವುದಕ್ಕೆ ಮೊದಲು ಅರಮನೆಯ ಗಂಟೆ ಹೊಡೆಯುವವನಾಗಿದ್ದೆ. ಆಮೇಲೆ ಕೋಟೆಯ ಕಾವಲುಗಾರರಲ್ಲಿ ಒಬ್ಬನಾದೆ. ಆಮೇಲೆ ಕೋಶಾಗಾರಕ್ಕೆ ರಕ್ಷಕನಾಗಿ ಬಂದೆ. ಮಹಾರಾಜರು ನನ್ನನ್ನು ಅನೇಕ ಅಗ್ನಿ



ಪರೀಕ್ಷೆಗಳಿಗೆ ಗುರಿಪಡಿಸಿದರು. ಎಲ್ಲವನ್ನೂ ತಾಳಿಕೊಂಡ ಮೇಲೆ, ಈ ಕೋಶಾಗಾರದ ಪದವಿ ಅನುಗ್ರಹ ಮಾಡಿದರು. ಅನೇಕ ಮೆಟ್ಟಿಲುಗಳನ್ನು ಹಾರಲು ಸಾಧ್ಯವೇ ಹೇಳು ? "

ಈ ಮಾತುಗಳೆಲ್ಲಾ ವಿನೋದನಿಗೆ ಅಧಿಕ ಪ್ರಸಂಗವಾಗಿಯೇ ತೋರಿತು. ಅವನ ಮುಖಭಾವಗಳನ್ನು ಮಾವಯ್ಯ ಲಕ್ಷಿಸಿಕೊಂಡೇ ಇದ್ದನು. ಇಬ್ಬರೂ ಅಲ್ಲಿಂದ ಹೊರಟರು.

" ಏನೋ ಅಂದುಕೊಂಡೆ. ಇವನ ಮಾತಿಗೆ ಬೆಲೆ ಕೊಡಬೇಕಾಗಿಲ್ಲ ಬಿಡು. ಮಂಡಲಾಧಿಕಾರಿಯೊಬ್ಬ ನನ್ನ ಸ್ನೇಹಿತನೇ. ಅವನನ್ನು ಕೂಡಾ ಒಮ್ಮೆ ನೋಡೋಣವೇ ? " ಎಂದನು ಮಾವಯ್ಯ.

ವಿನೋದನಲ್ಲಿ ಮತ್ತೆ ಆಶೆ ಚಿಗುರಿಕೊಂಡಿತು. ಇಬ್ಬರೂ ಒಬ್ಬ ಮಂಡಲಾಧಿಪತಿಯ ಬಳಿಗೆ ಹೋಗುವ ದಾರಿಯಲ್ಲಿ, ಹತ್ತುಮಂದಿ ಯುವಕರು ಅವರಿಗೆ ಇದಿರಾಗಿ ಬರುತ್ತಿದ್ದರು. ಅವರು ಗುಂಪಾಗಿ ಏನೋ ಮಾತಾಡಿಕೊಂಡು ಬರುವುದನ್ನು ನೋಡಿ ವಿನೋದನ ಮಾವಯ್ಯ, ಅವರಲ್ಲೊಬ್ಬನನ್ನು ತಡೆದು, " ಏನು ವಿಶೇಷ ? ನೀವು ಗುಂಪಾಗಿ ಎಲ್ಲಿಂದ ಬರುತ್ತಿರುವಿರಿ ? " ಎಂದು ಕೇಳಿದನು. ಅದಕ್ಕೆ ಅವನು ಹೀಗೆಂದನು : " ನಮ್ಮ ಅವಸ್ಥೆ ಏನು ಹೇಳಲಿ ? ನಾವೆಲ್ಲಾ ಒಬ್ಬೊಬ್ಬರೂ ಒಂದೊಂದು ಬಗೆಯಲ್ಲಿ ವಿದ್ಯಾವಂತರು. ನಮ್ಮ ವಿದ್ಯೆಗಳೂ, ಬುದ್ಧಿವಂತಿಕೆಗಳೂ ನಮ್ಮ ಹೊಟ್ಟೆಗೆ ಗತಿಗಾಣಿಸುವ ಹಾಗಿಲ್ಲ. ರಾಜಧಾನಿಯಲ್ಲಿ ಕೂಡಾ ನಮ್ಮ ವಿದ್ಯೆಗೆ ತಕ್ಕ ಗೌರವವಿಲ್ಲ. ಮತ್ತೆ ನಾವೇಕೆ ಈ ನಗರದಲ್ಲಿರಬೇಕು ? ಹಳ್ಳಿಯಲ್ಲಿ ಹೊಲಗಳನ್ನಾದರೂ ಉತ್ತು ಬದುಕಬೇಕೆಂದಿದ್ದೇವೆ."

ಹೀಗೆ ಹೇಳಿ ಅವರೆಲ್ಲ ಮುಂದೆ ಹೋದರು.

ಅವರ ಮಾತನ್ನು ಕೇಳುತ್ತಿದ್ದಂತೆ ವಿನೋದನಲ್ಲಿ ಆಕಸ್ಮಿಕವಾಗಿ ಮಾರ್ಪಾಟು ಉಂಟಾಯಿತು. ಅವನ ಭ್ರಮೆ ಒಮ್ಮೆಗೇ ತೊಲಗಿ ಹೋಯಿತು.

" ಮಂಡಲಾಧಿಪತಿಯ ಮನೆ ಇಲ್ಲಿಗೆ ಸಮೀಪದಲ್ಲೇ ಇದೆ. ಬಾ ಹೋಗಣ " ಎಂದನು ಮಾವ.

" ಬೇಡ ಮಾವಯ್ಯ. ಇನ್ನು ಯಾರನ್ನೂ ನೋಡಬೇಕಾಗಿಲ್ಲ. ಈಗ ನನಗಿರುವ ಉದ್ಯೋಗವೇ ಎಷ್ಟೋ ವಾಸಿ. ಆ ವಿದ್ಯಾವಂತ ಯುವಕರ ಪರಿಸ್ಥಿತಿಗಿಂತ ನನ್ನದೆಷ್ಟೋ ಮೇಲು. ಈಗಿನ ಕೆಲಸದಲ್ಲಿದ್ದೇ ಮುಂದಕ್ಕೆ ಬರಲು ಪ್ರಯತ್ನಿಸುತ್ತೇನೆ. ನಿಮಗೆ ನನ್ನಿಂದ ತುಂಬಾ ಶ್ರಮವಾಯಿತು. ಕ್ಷಮಿಸಿ ಮಾವಯ್ಯಾ " ಎಂದನು ವಿನೋದ.

ಮಾವಯ್ಯನಿಗೆ ತನ್ನೊಳಗೇ ನಗುಬಂದಿತು. ವಿನೋದನು ಮತ್ತೆ ದೊಡ್ಡಸ್ತಿಕೆ ತೋರಿಸಲು ಹೋಗದೆ, ಎಷ್ಟೆಂದರಷ್ಟರಲ್ಲೇ ಇರತೊಡಗಿದನು.





# ಶುಕ್ರ

ಭೃಗು ಮಹರ್ಷಿಯ ಮಗನಾದ ಶುಕ್ರನು ದಾನವರಿಗೆ ಗುರುವಾಗಿ ತುಂಬಾ ಪ್ರಸಿದ್ಧಿ ಪಡೆದವನು. ಇವನು ಬೃಹಸ್ಪತಿಯ ತಂದೆಯಾದ ಅಂಗಿರಸನ ಬಳಿಯಲ್ಲಿ ಬೃಹಸ್ಪತಿಯ ಜತೆಯಲ್ಲಿಯೇ ವಿದ್ಯಾಭ್ಯಾಸ ಮಾಡಿದನು. ಅಂಗಿರಸನು ಈ ಇಬ್ಬರ ನಡುವೆ ಪಕ್ಷಪಾತ ಮಾಡಿ ವಿದ್ಯೆ ಕಲಿಸಿದುದರಿಂದ, ಶುಕ್ರನು ಅಂಗಿರಸನನ್ನು ಬಿಟ್ಟು, ಗೌತಮನ ಬಳಿಗೆ ಹೋಗಿ ತನಗೆ ವಿದ್ಯೆ ಕಲಿಸಬೇಕೆಂದು ಕೇಳಿಕೊಂಡನು.

ಗೌತಮನು ಅಂಗಿರಸನ ಬಳಿಯಿಂದ ಬಂದ ಶುಕ್ರನಿಗೆ ವಿದ್ಯೆ ಕಲಿಸಲು ಹಿಂಜರಿದು, ಶಿವನನ್ನು ಆಶ್ರಯಿಸಿದರೆ ಎಲ್ಲಾ ವಿದ್ಯೆಗಳೂ ಬರುತ್ತವೆಂದು ಹೇಳಿ, ತನ್ನ ಬಳಿಯಿಂದ ಹೊರಡಿಸಿ ಬಿಟ್ಟನು. ಶುಕ್ರನು ಶಿವನನ್ನು ಆರಾಧಿಸಿ, ಪ್ರತ್ಯಕ್ಷಪಡಿಸಿಕೊಂಡು, ವಿದ್ಯೆಗಳನ್ನು ಪಡೆದು, "ಮೃತ ಸಂಜೀವಿನಿ" ಎಂಬ ವಿಶೇಷ ವಿದ್ಯೆಯನ್ನೂ ಕಲಿತನು.

ತರುವಾಯ ಶುಕ್ರನು ದಾನವರಿಗೆ ಗುರುವಾಗಿ, ದೇವದಾನವರೊಳಗೆ ಆಗಾಗ ನಡೆಯುವ ಯುದ್ಧದಲ್ಲಿ ಸತ್ತುಹೋದ ದಾನವರನ್ನು ತನ್ನ ಮೃತ ಸಂಜೀವಿನಿ ವಿದ್ಯೆಯಿಂದ ಬದುಕಿಸುತ್ತಾ ಬಂದನು.

ಇದು ದೇವತೆಗಳಿಗೆ ದೊಡ್ಡ ತಲೆನೋವಾಗಿ ಪರಿಣಮಿಸಿತು. ಅಮರತ್ವ ಪಡೆದ, ತಮ್ಮ ಹಾಗೆಯೇ ಇನ್ನೊಂದು ವಿಧವಾಗಿ ಅಮರರಂತಾಗುವ ರಾಕ್ಷಸರ ಕಾಟವನ್ನು ದೇವತೆಗಳು ಸಹಿಸದಾದರು. ಮುಖ್ಯವಾಗಿ ಅಂಧಕಾಸುರನನ್ನು ಕೊಲ್ಲಬೇಕಾದರೆ ದೇವತೆಗಳಿಗೆ ಸಾಕುಸಾಕಾಯಿತು. ಅಂಧಕಾಸುರನೆಂದರೆ ಬ್ರಹ್ಮನಿಂದ ದೊಡ್ಡ ವರಗಳನ್ನು ಪಡೆದು ಮದೋನ್ಮತ್ತನಾದವನು. ಅವನಿಗಿರುವ ಮುಖ್ಯ ದುರ್ಗುಣವೆಂದರೆ, ಸುಂದರಿಯರಾದ ಸ್ತ್ರೀಯರನ್ನು ಸೆರೆಹಿಡಿಯುವುದು. ಒಂದು ಸಾರಿ ಅವನು ಪಾರ್ವತಿಯ ಮೇಲೆಯೇ ಕಣ್ಣು ಹಾಕಿದನು. ಅವನನ್ನು ಕೊಲ್ಲಬೇಕಾದರೆ ಶಿವನು ತಾತ್ಕಾಲಿಕವಾಗಿ ಶುಕ್ರನನ್ನು ನುಂಗಿ, ಅಂಧಕಾಸುರನನ್ನು ಕೊಂದನು. ಕಾಲಾವಧಿಯಾದ ಮೇಲೆ ಶಿವನು ಶುಕ್ರನನ್ನು ತನ್ನ ಹೊಟ್ಟೆಯಿಂದ ಹೊರಗೆ ಹಾಕಿ ಕಳುಹಿಸಿದನು.

ಶುಕ್ರನ ಮೃತ ಸಂಜೀವಿನಿ ವಿದ್ಯೆಯಿಂದ ದೇವತೆಗಳಿಗೆ ಇನ್ನೂ ಕೆಲವು ಕಷ್ಟಗಳು ಬಂದುವು. ಶುಕ್ರನ ಸಹಾಯವು ದಾನವರಿಗೆ ಇಲ್ಲದಂತೆ ಮಾಡಲು, ಇಂದ್ರನು ತನ್ನ ಮಗಳಾದ ಜಯಂತಿಯನ್ನು ಶುಕ್ರನ

ಬಳಿಗೆ ಕಳುಹಿಸಿ ಕೊಟ್ಟನು. ಶುಕ್ರನು ಜಯಂತಿಯ ಮೋಹದಲ್ಲಿ ಬಿದ್ದು ಎಲ್ಲಿಯೋ ಹುದುಗಿ ದಾನವರಿಗೆ ಸಿಕ್ಕದಂತಾದನು. ದಾನವರು ಶುಕ್ರನನ್ನು ಹುಡುಕಾಡಿ ಕೊಂಡಿರುವಾಗ, ಬೃಹಸ್ಪತಿ ಶುಕ್ರನ ರೂಪದಲ್ಲಿ ಬಂದು, ದಾನವರ ನಡುವೆ ಸೇರಿ, ಅವರ ರಹಸ್ಯ ಗಳನ್ನು ತಿಳಿದುಕೊಳ್ಳುತ್ತ, ಅವರಿಗೆ ನಷ್ಟವಾಗು ವಂತಹ ಆಲೋಚನೆಗಳನ್ನು ಹೇಳತೊಡಗಿದನು. ಅಷ್ಟರಲ್ಲಿ ನಿಜ ಶುಕ್ರನೇ ಅಲ್ಲಿಗೆ ಬಂದು ಬಿಟ್ಟನು. ನಿಜವಾದ ಶುಕ್ರನು ಯಾರೆಂದು ತಿಳಿಯುವುದೇ ದಾನವರಿಗೆ ದೊಡ್ಡ ಸಮಸ್ಯೆಯಾಯಿತು.

ಮೃತ ಸಂಜೀವಿನಿ ವಿದ್ಯೆಯನ್ನು ಕಲಿತುಕೊಳ್ಳಲು ದೇವತೆಗಳು ಕಚನನ್ನು ಕಳುಹಿಸಿದುದು, ಆ ಕಚನು ಶುಕ್ರನಿಗೆ ಶುಶ್ರೂಷೆ ಮಾಡುತ್ತ ಶುಕ್ರನ ಮಗಳು ದೇವಯಾನಿಯ ಪ್ರೇಮಕ್ಕೆ ಪಾತ್ರನಾದುದು. ದಾನವರು ಅನೇಕ ಸಾರಿ ಕಚನನ್ನು ಕೊಂದರೆ ದೇವಯಾನಿ ತಂದೆಯಿಂದ ಅವನನ್ನು ಬದುಕಿಸಿದುದು ಎಲ್ಲರಿಗೂ ಗೊತ್ತಿರುವ ಬಹು ಪ್ರಚಾರವಿರುವ ಕಥೆ. ಆ ಕಾಲದಲ್ಲೇ ಮದ್ಯನಿಷೇಧವು ಬರಲು ಕಚನೇ ಕಾರಣನೆಂಬುದನ್ನು ಬಹಳ ಮಂದಿ ಗಮನಿಸಿಲ್ಲ.

ಪ್ರತಿಸಲವೂ ಸತ್ತ ಕಚನನ್ನು ಶುಕ್ರನೇ ಬದುಕಿಸುವ ನೆಂದು ತಿಳಿದು ಕಡೆಗೆ ದಾನವರು ಕಚನನ್ನು ಸುಟ್ಟು ಬೂದಿಮಾಡಿ ಅದನ್ನು ಮದ್ಯದಲ್ಲಿ ಸೇರಿಸಿ ಶುಕ್ರನು ಕುಡಿಯುವಂತೆ ಮಾಡಿದರು. ಶುಕ್ರನು ಅವನನ್ನು ಬದುಕಿಸುವಾಗ ಕಚನು ತನ್ನ ಹೊಟ್ಟೆಯಲ್ಲಿರುವ ಸಂಗತಿ ಗೊತ್ತಾಯಿತು. ತಾನು ಸಾಯದೆ ಕಚನು ಹೊರಗೆ ಬರುವಂತಿಲ್ಲ. ಆದುದರಿಂದ ಶುಕ್ರನು ಅವನಿಗೆ ಮೃತ ಸಂಜೀವಿನಿಯನ್ನು ಉಪದೇಶ ಮಾಡಿದನು. ಅವನು ಹೊರಗೆ ಬಂದ ಮೇಲೆ ಶುಕ್ರನನ್ನೂ ಮೃತ ಸಂಜೀವಿನಿಯಿಂದ ಬದುಕಿಸಿದನು. ಇಷ್ಟರವರೆಗೆ ಬಂದುದರಿಂದ ಮದ್ಯಸೇವನೆ ಮಹಾ ಪಾಪವೆಂದು ಶುಕ್ರನು ಶಾಸನ ಮಾಡಿದನು.

"ಒಕ್ಕಣ್ಣ ಶುಕ್ರಾಚಾರ್ಯ" ಎಂದು ಎಲ್ಲರೂ ಹೇಳುತ್ತಾರೆ. ವಾಮನಮೂರ್ತಿ ಬಲಿಚಕ್ರವರ್ತಿಯ ಬಳಿಗೆ ಬಂದು ಮೂರಡಿ ಭೂಮಿಯನ್ನು ಕೇಳಿದಾಗ, ಬಲಿ ದಾನವನ್ನೆರೆಯಲು ಜಲಕಲಶವನ್ನು ಎತ್ತಿದನು. ಆಗ ಶುಕ್ರನು ನೀರಿನ ಧಾರೆ ಬೀಳದಂತೆ ಸೂಕ್ಷ್ಮರೂಪ ದಲ್ಲಿ ಕಲಶದೊಳಗಿದ್ದನು. ಬಲಿ ದರ್ಭೆಯಿಂದ ಕಲಶದ ಕೊಂಬನ್ನು ಚುಚ್ಚಿ ನೀರು ಸರಿಯಾಗಿ ಬೀಳು ವಂತೆ ಮಾಡುವಾಗ, ಶುಕ್ರನ ಒಂದು ಕಣ್ಣು ಹೋಯಿತು.

ಪುರಾಣಗಳಲ್ಲಿ ಶುಕ್ರನ ಘನತೆ ಹೇಗಿದ್ದರೂ ಆಕಾಶ ದಲ್ಲಿ ಕಾಣುವ ಗ್ರಹಗಳಲ್ಲಿ ತುಂಬಾ ಕಾಂತಿವಂತವಾಗಿ ಕಾಣುವುದು ಶುಕ್ರಗ್ರಹವೇ. ಗುರುಗ್ರಹ ಕೂಡಾ ಅದರ ಮುಂದೆ ಹೋಲಿಸುವಂತಿಲ್ಲ.





# ಆದರ್ಶ ಶಿಷ್ಯ

ಪೂರ್ವಕಾಲದಲ್ಲಿ ಧೌಮ್ಯನೆಂಬ ಮುನಿಯ ಆಶ್ರಮವು ಅರಣ್ಯದಲ್ಲಿದ್ದಿತು. ಅಲ್ಲಿ ಶಿಷ್ಯರು ಅಧ್ಯಯನ ಮಾಡುತ್ತ ಗುರುಗಳ ಸೇವೆಗಳನ್ನು ಶ್ರದ್ಧೆಯಿಂದ ಮಾಡಿಕೊಂಡಿದ್ದರು.

ಧೌಮ್ಯನ ಶಿಷ್ಯರಲ್ಲಿ ಉಪಮನ್ಯು ಎಂಬವನು ಗುರುಗಳ ಪಶುಗಳನ್ನು ಕಾಯುವ ಕೆಲಸಮಾಡುತ್ತಿದ್ದನು. ಅವನು ಪಶುಗಳನ್ನು ಹುಲ್ಲುಗಾವಲಿಗೆ ಸಾಗಿಸಿಕೊಂಡು ಹೋಗಿ, ಸಾಯಂಕಾಲ ಆಶ್ರಮಕ್ಕೆ ಹಿಂದಿರುಗಿಸುತ್ತಿದ್ದನು.





ಒಂದು ದಿನ ಧೌಮ್ಯನು ಉಪಮನ್ಯುವನ್ನು ನೋಡಿ, "ಹುಲ್ಲುಗಾವಲಿನಲ್ಲಿ ಹಸಿವಾದರೆ ಏನು ತಿನ್ನುತ್ತಿ?" ಎಂದು ಕೇಳಿದನು. "ದನಗಳನ್ನು ಮೇಯಲು ಬಿಟ್ಟು, ಸಮೀಪದ ಹಳ್ಳಿಗಳಿಗೆ ಹೋಗಿ ಭಿಕ್ಷೆ ಬೇಡಿ ತಿನ್ನುತ್ತೇನೆ" ಎಂದನು ಉಪಮನ್ಯು. "ನನ್ನ ಅಪ್ಪಣೆಯಿಲ್ಲದೆ ಅದನ್ನು ಹೇಗೆ ತಿನ್ನುವಿ?" ಎಂದು ಧೌಮ್ಯನು ಪುನಃ ಕೇಳಿದನು.



ಮಾರಣೇ ದಿನ ಉಪಮನ್ಯು, ತಾನು ಭಿಕ್ಷೆ ಬೇಡಿ ಸಂಪಾದಿಸಿದ ಆಹಾರವನ್ನು ಗುರುಗಳಿಗೇ ತಂದು ಕೊಟ್ಟನು. ಅದರಲ್ಲಿ ಸ್ವಲ್ಪ ತನಗೂ ಕೊಡುವರೆಂದು ಅವನ ಮನಸ್ಸಿನಲ್ಲಿತ್ತು. ಧೌಮ್ಯನು ಹಾಗೇನೂ ಕೊಡಲಿಲ್ಲ. ಆದರೂ ಉಪಮನ್ಯು ದಿನಾ ಭಿಕ್ಷೆ ಬೇಡಿ ತಂದುದನ್ನು ಗುರುಗಳಿಗೇ ಕೊಡುತ್ತ ಬಂದನು.



ಹಸಿವನ್ನು ತಾಳದೆ ಉಪಮನ್ಯು ದನಗಳ ಹಾಲನ್ನು ಹಿಂಡಿಕೊಂಡು ಕುಡಿಯಲು ತೊಡಗಿದನು. ಆ ಸಂಗತಿ ತಿಳಿದು ಧೌಮ್ಯನು, "ಆಶ್ರಮದಲ್ಲಿ ಹಿಂಡಿ, ಕೆಚ್ಚಲಿನಲ್ಲಿ ಉಳಿಯುವ ಹಾಲು ಕರುಗಳ ಸೊತ್ತು," ಎಂದು ಹೇಳಿದನು.



ಕರುಗಳು ದನಗಳ ಹಾಲನ್ನು ಕುಡಿಯುತ್ತಿರುವಾಗ ಕರುಗಳ ಮೂತಿಗಳಲ್ಲಿ ಅಂಟಿದ ನೊರೆಗಳನ್ನು ಉಪಮನ್ಯು ಒರೆಸಿ ನಕ್ಕಿಕೊಂಡನು. ಅವನ ಮೇಲಿನ ಪ್ರೇಮದಿಂದ ಕರುಗಳು ಹೆಚ್ಚು ನೊರೆ ಸೇರುವ ಹಾಗೆ ಮಾಡುತ್ತಿದ್ದುವೇನೋ !

ಕಡೆಗೆ ಹಸಿವಿನ ಸಂಕಟವನ್ನು ತಾಳಲಾರದೆ ಉಪಮನ್ಯು ಏನೇನೋ ಎಲೆಗಳನ್ನು ಹರಿದು ತಿನ್ನ ತೊಡಗಿದನು. ಆಗ ಯಾವುದೋ ಎಲೆಯ ರಸ ಕಣ್ಣಗೆ ಬಿದ್ದು ಅವನು ತೀರಾ ಕುರುಡನಾಗಿ, ತಡವರಿಸುತ್ತ ಆಶ್ರಮಕ್ಕೆ ಹೊರಟನು.





ದಾರಿಯಲ್ಲಿ ಉಪಮನ್ಯು ಒಂದು ಕಣಿವೆಯೊಳಗೆ ಬಿದ್ದು, ದುರ್ಬಲತ್ವದಿಂದ ಮತ್ತೆ ಮೇಲೇರಿ ಬರಲಾರದೆ ಚಡಪಡಿಸಿದನು. ಕೂಗಿಕೊಳ್ಳಲಿಕ್ಕೂ ಶಕ್ತಿಯಿರಲಿಲ್ಲ. ಕತ್ತಲೆಯಾಯಿತು.

ಗೋವುಗಳು ಆಶ್ರಮಕ್ಕೆ ಹಿಂದಿರುಗಿದುವು. ಉಪಮನ್ಯು ಬಾರದಿರುವುದನ್ನು ನೋಡಿ ಧೌಮ್ಯನು, ಅವನಿಗೇನೋ ಅಪಾಯವಾಗಿರುವುದೆಂದು ಊಹಿಸಿ, ಅವನನ್ನು ಹುಡುಕುತ್ತಾ ಹೊರಟನು.





ಕಣಿವೆಯೊಳಗಿರುವ ಶಿಷ್ಯನನ್ನು ನೋಡಿ ಧೌಮ್ಯನು, ನಡೆದ ಸಂಗತಿಯನ್ನು ತಿಳಿದನು. ದೇವತೆಗಳ ವೈದ್ಯರಾದ ಅಶ್ವಿನೀ ದೇವತೆಗಳನ್ನು ಪ್ರಾರ್ಥಿಸುವಂತೆ ಉಪಮನ್ಯುವಿಗೆ ಹೇಳಿದನು.



ಹಾಗೆಯೇ ಮಾಡಿದನು ಉಪಮನ್ಯು. ಅಶ್ವಿನೀ ದೇವತೆಗಳು ಉಪಮನ್ಯುವಿನ ಬಳಿಯಲ್ಲೇ ಪ್ರತ್ಯಕ್ಷರಾಗಿ, ಅವನಿಗೆ ಒಂದು ರೊಟ್ಟಿಯನ್ನು ಕೊಟ್ಟು, "ಇದನ್ನು ತಿನ್ನು, ನಿನ್ನ ಕುರುಡು ಹೋಗುತ್ತದೆ." ಎಂದರು. "ನನ್ನ ಗುರುಗಳ ಅಪ್ಪಣೆಯಿಲ್ಲದೆ ನಾನು ಏನೂ ತಿನ್ನಬಾರದು" ಎಂದನು ಉಪಮನ್ಯು.



ಅಶ್ವಿನೀ ದೇವತೆಗಳು ಸಂತೋಷಪಟ್ಟು ಅವನನ್ನು ಗುರುಗಳ ಬಳಿಗೆ ಕರೆದು ತಂದರು. ಗುರುಗಳ ಅನುಮತಿ ಪಡೆದು ಉಪಮನ್ಯು ರೊಟ್ಟಿಯನ್ನು ತಿಂದನು. ಕೂಡಲೇ ಅವನಿಗೆ ದೃಷ್ಟಿ ಬಂದುದು ಮಾತ್ರವಲ್ಲದೆ, ಸಂಪೂರ್ಣ ಆರೋಗ್ಯವೂ ಉಂಟಾಯಿತು. ಅಶ್ವಿನೀ ದೇವತೆಗಳೂ ಅವನನ್ನು ಆಶೀರ್ವದಿಸಿದರು.



# ಅವೀಕ್ಷಿತ

ಪುರಾಣ ಕಾಲದಲ್ಲಿ ಕರಂಧಮನೆಂಬ ರಾಜನಿಗೆ ವೀರಳೆಂಬ ರಾಣಿಯಿದ್ದಳು. ಅವೀಕ್ಷಿತನು ಅವಳಿಗೆ ಹುಟ್ಟಿದ ಮಗ. ಜೋತಿಷ್ಕರು "ಈ ಜಾತಕನಿಗೆ ದುಷ್ಟಗ್ರಹಗಳ ವೀಕ್ಷಣವಿಲ್ಲ" ಎಂದುದರಿಂದ, ಅವನಿಗೆ "ಅವೀಕ್ಷಿತ" ಎಂದು ಹೆಸರಿಟ್ಟಿದ್ದರು.

ಕರಂಧಮನು ತಂದೆಯಿಂದ ಸರಿಯಾದ ರೀತಿಯಲ್ಲಿ ಪಟ್ಟಾಭಿಷಿಕ್ತನಾದವನಲ್ಲ. ಅವನ ತಂದೆ ದುಷ್ಟತನಗಳುಳ್ಳವನಾದುದರಿಂದ, ಪ್ರಜಾಪೀಡಕನಾಗಿದ್ದನು. ಆತನ ಪೀಡೆಯನ್ನು ತಾಳಲಾರದೆ ಮಂತ್ರಿಗಳೂ ಪ್ರಜೆಗಳೂ ಕರಂಧಮನ ತಂದೆಯನ್ನು ರಾಜ್ಯದಿಂದ ಓಡಿಸಿ ಕರಂಧಮನಿಗೆ ಪಟ್ಟಾಭಿಷೇಕ ಮಾಡಿದ್ದರು. ಆಗ ಕರಂಧಮನು ತನಗೆ ಕೂಡಾ ತಂದೆಯ ಗತಿಯೇ ಬಂದೀತೆಂದುಕೊಂಡು ಮಂತ್ರಿಗಳಿಗೂ ಪ್ರಜೆಗಳಿಗೂ ಧಾರಾಳವಾಗಿ ಹಣವನ್ನು ಕೊಡುತ್ತ ಬೊಕ್ಕಸವನ್ನೇ ಖಾಲಿಮಾಡಿಕೊಂಡನು. ಈ ಸಂಗತಿಯನ್ನು ಗೂಢಚಾರರಿಂದ ತಿಳಿದುಕೊಂಡ ಸುತ್ತುಮುತ್ತಲಿನ ರಾಜರು, ಕರಂಧಮನ ರಾಜಧಾನಿಯನ್ನು ಮುತ್ತಿಗೆ ಹಾಕಿ ಹಿಡಿದು, ಅವನನ್ನು ಕಾಡಿಗೆ ಓಡಿಸಿಬಿಟ್ಟರು. ಅಂತೂ ತಂದೆಯ ಗತಿಯೇ ಕರಂಧಮನಿಗೆ ಬಂದರೂ, ಅವನು ಎಚ್ಚರ ತಂದುಕೊಂಡು ಸೇನೆಗಳನ್ನು ಸೇರಿಸಿ, ಮತ್ತೆ ಯುದ್ಧಮಾಡಿ ತನ್ನ ರಾಜ್ಯವನ್ನು ಗೆದ್ದುಕೊಂಡನು.

ಕರಂಧಮನ ಮಗ ಅವೀಕ್ಷಿತನು ತುಂಬ ಪ್ರತಿಭಾವಂತನು. ಅವನು ಸ್ವಯಂವರಗಳಲ್ಲಿ ಭಾಗವಹಿಸಿದಾಗ, ವೀರಾ, ಗೌರೀ, ಸುಭದ್ರಾ, ಲೀಲಾವತೀ, ದಾರಿಕಾ. ಮಾಲ್ಯವತೀ, ಕುಮುದ್ವತೀ ಎಂಬ ಕನ್ಯೆಯರು ಅವನನ್ನೇ ಪತಿಯಾಗಿ ವರಿಸಿಕೊಂಡರು. ಆ ಮೇಲೆ ವಿಶಾಲಾ ಎಂಬ ರಾಜಕುಮಾರಿಯ ಸ್ವಯಂವರ ಬಂದಿತು. ಅವೀಕ್ಷಿತನು ಹೋಗಿ ವರರ ಸಾಲಿನಲ್ಲಿ ಸೇರಿದನು. ಅವನನ್ನು ನೋಡಿ ಈ ಮೊದಲೇ ಅವನ ಮೇಲೆ ಅಸೂಯೆಗೊಂಡಿದ್ದ ಇತರ ರಾಜಕುಮಾರರು ಅವನೊಂದಿಗೆ ಅಧರ್ಮ ರೀತಿಯಲ್ಲಿ ಯುದ್ಧಮಾಡಿ ಸೋಲಿಸಿ ಬಂಧಿಸಿಬಿಟ್ಟರು. ಆದರೆ ವಿಶಾಲಾ ಅವನ ಹೊರತು ಇತರರನ್ನು ವರಿಸಲು ನಿರಾಕರಿಸಿದಳು. ಆ ಸ್ವಯಂವರವು ನಿಂತಿತು.

ಅಷ್ಟರಲ್ಲಿ ತನ್ನ ಮಗನು ಸೋತುಹೋದ ಸಮಾಚಾರ ಕರಂಧಮನಿಗೆ ತಿಳಿಯಿತು. ಅವನು ದೊಡ್ಡ ಸೈನ್ಯದೊಂದಿಗೆ ಬಹಳ ವೇಗದಿಂದ ಬಂದು

ಎಲ್ಲರನ್ನೂ ಸೋಲಿಸಿ ಅವೀಕ್ಷಿತನನ್ನು ಬಂಧವಿಮುಕ್ತ ಮಾಡಿದನು. ಆಗ ವಿಶಾಲಾ ಅವನನ್ನು ಮದುವೆ ಯಾಗಲು ಸಿದ್ಧಳಾದಳು. ಆದರೆ ತಾನು ಸೋತು ಹೋದವನೆಂಬ ಕಾರಣದಿಂದಾಗಿ ಅವೀಕ್ಷಿತನು ಅವಳನ್ನು ಮದುವೆಯಾಗಲು ಒಪ್ಪಲಿಲ್ಲ.

ಅಭಿಮಾನಧನನಾದ ಅವೀಕ್ಷಿತನನ್ನು ತಂದೆ ಮನೆಗೆ ಕರೆದುಕೊಂಡು ಹೋದನು. ವಿಶಾಲಾಳನ್ನು ಅಪಾರ ವಾಗಿ ಪ್ರೇಮಿಸಿಬಿಟ್ಟಿದ್ದ ಅವೀಕ್ಷಿತನು, ಇತರ ಪತ್ನಿಯರ ಮುಖ ನೋಡದೆ ಬ್ರಹ್ಮಚರ್ಯ ವ್ರತ ದಲ್ಲಿರ ತೊಡಗಿದನು. ಅತ್ತ ವಿಶಾಲಾಳು ಹೇಗಾದರೂ ಅವೀಕ್ಷಿತನೇ ತನ್ನ ಗಂಡನಾಗಬೇಕೆಂಬ ದೀಕ್ಷೆಯಲ್ಲಿ ತಂದೆಯ ಅನುಮತಿ ಪಡೆದು ಕಾಡಿಗೆ ಹೋಗಿ ಅಲ್ಲಿ ತಪಸ್ಸು ಮಾಡಲು ಕುಳಿತಳು.

ಅವೀಕ್ಷಿತನನ್ನು ಹೇಗಾದರೂ ಸಂಸಾರದ ಕಡೆಗೆ ಇಳಿಸಬೇಕೆಂದು, ಅವನ ತಾಯಿ ಅವನೊಂದಿಗೆ, "ಅಪ್ಪಾ, ನಾನು ಕಿಮಿಚ್ಛಕವ್ರತ ಹಿಡಿದಿದ್ದೇನೆ. ಅದರಲ್ಲಿ ದಾನವು ಬಹುಮುಖ್ಯ. ಇದನ್ನು ನೀನು ಗಮನದಲ್ಲಿಟ್ಟುಕೊಂಡು ಯಾರು ಏನು ಕೇಳಿದರೂ ಕೊಡುತ್ತಾ ಇರಬೇಕು" ಎಂದಳು. ಹಾಗೆಯೇ ಆಗಲೆಂದನು ಅವೀಕ್ಷಿತ. ಹೀಗೆ ತಾಯಿ ವ್ರತವನ್ನು ಪಾಲಿಸುತ್ತಿರಲು, ಅವೀಕ್ಷಿತನು ಕೇಳಿದವರಿಗೆ ಕೇಳಿದು ದನ್ನು ಕೊಡುತ್ತಾ ಬಂದನು.

ಆಗ ಅವೀಕ್ಷಿತನ ಬಳಿಗೆ ಕರಂಧಮನು ಬಂದು ತನಗೆ ಮೊಮ್ಮಗನನ್ನು ಕೊಡುವಂತೆ ಕೇಳಿದನು. ಕೇಳಿದು ದನ್ನು ಕೊಡಲೇ ಬೇಕಾಗಿ ಬಂದುದರಿಂದ ಅವೀಕ್ಷಿತನು ಮತ್ತೆ ಸಂಸಾರಜೀವನಕ್ಕೆ ಇಳಿಯಲು ಒಪ್ಪಿಕೊಂಡನು.

ಒಂದು ದಿನ ಅವನು ಕಾಡಿನಲ್ಲಿ ಬೇಟೆಯಾಡಲು ಹೋದಾಗ. "ಅಯ್ಯೋ! ನಾನು ಅವೀಕ್ಷಿತನ ಪತ್ನಿ! ರಕ್ಷಿಸಿರಿ! ರಕ್ಷಿಸಿರಿ!" ಎಂಬ ಆರ್ತನಾದವು ಅವನ ಕಿವಿಗೆ ಬಿತ್ತು. ಅವನು ಅಲ್ಲಿಗೆ ಹೋಗಿ, ಒಬ್ಬ ರಾಕ್ಷಸನ ಕೈಗೆ ಸಿಕ್ಕಿಕೊಂಡ ಸ್ತ್ರೀಯನ್ನು ನೋಡಿ, ರಾಕ್ಷಸನನ್ನು ಕೊಂದು ಅವಳನ್ನು ಬಿಡಿಸಿದನು. ರಾಕ್ಷಸ ನನ್ನು ಕೊಂದ ಅವನ ಕಾರ್ಯಕ್ಕೆ ಮೆಚ್ಚಿದ ದಿವ್ಯ ಪುರು ಷರು ಪ್ರತ್ಯಕ್ಷರಾಗಿ ವರವನ್ನು ಕೇಳುವಂತೆ ಹೇಳಿದರು.

"ನನ್ನ ತಂದೆಗೆ ಮೊಮ್ಮಗನು ಬೇಕಂತೆ. ನನಗೆ ಒಬ್ಬ ಮಗನಾಗುವಂತೆ ವರಕೊಡಿರಿ" ಎಂದನು ಅವೀಕ್ಷಿತ. "ಇವಳೇ ನಿನ್ನ ಪತ್ನಿಯಾಗಿ, ಮಗನನ್ನು ಪಡೆಯುವಳು!" ಎಂದರು ದಿವ್ಯಪುರುಷರು.

"ವಿಶಾಲಾಳನ್ನು ಪ್ರೇಮಿಸಿದ ನಾನು ಇನ್ನೊಬ್ಬ ಳಲ್ಲಿ ಮಗನನ್ನು ಪಡೆಯಲಾರೆನು." ಎಂದನು ಅವೀಕ್ಷಿತ. "ಆ ವಿಶಾಲಾ ಇವಳೇ. ನಿನ್ನನ್ನು ವರಿಸ ಲೆಂದೇ ತಪಸ್ಸು ಮಾಡಿ ನಮ್ಮನ್ನು ಮೆಚ್ಚಿಸಿದ್ದಾಳೆ" ಎಂದು ಹೇಳಿ ಅವರಿಬ್ಬರ ಪಾಣಿಗ್ರಹಣ ಮಾಡಿಸಿ, ದಿವ್ಯಪುರುಷರು ಮಾಯವಾದರು.





# ಹರಿದಾಸರ ಮಾತು

**ಒಂ**ದು ದೇವಾಲಯದಲ್ಲಿ ಹರಿಕಥಾ ಕಾಲಕ್ಷೇಪವು ನಡೆಯುತ್ತಿದ್ದಿತು. ಕಥಾ ಸಂದರ್ಭದಲ್ಲಿ ಹರಿದಾಸರು, "ಇತರರ ಸೊತ್ತನ್ನು ಅಪಹರಿಸಿದವರಿಗೆ ಅದು ಎಂದಿಗೂ ದಕ್ಕಲಾರದು." ಎಂದರು.

ಈ ಮಾತುಗಳನ್ನು ಕೇಳಿ ಮೂವರು ಜತೆ ಕಳ್ಳರು, "ನಾವು ಮೂವರೂ ಈ ಹರಿದಾಸನ ಮಾತನ್ನು ಸುಳ್ಳುಮಾಡಲೇ ಬೇಕು. ಇವನ ಮನೆಯಲ್ಲೇ ಕಳ್ಳತನ ಮಾಡಿಬಿಡೋಣ" ಎಂದು ತಮ್ಮೊಳಗೆ ಮಾತಾಡಿಕೊಂಡರು. ಅವರಲ್ಲಿ ಒಬ್ಬನ ಹೆಸರು ಇಡುಂಬ; ಇನ್ನೊಬ್ಬನದು ಕಡುಂಬ, ಮತ್ತೊಬ್ಬನ ಹೆಸರು ದುಡುಂಬ.

ಮೂವರೂ ಮಧ್ಯ ರಾತ್ರಿಯಲ್ಲಿ ಹರಿದಾಸರ ಮನೆಗೆ ಕನ್ನಹಾಕಿ ಹರಿದಾಸರನ್ನೂ ಅವರ ಪತ್ನಿಯನ್ನೂ ಕಟ್ಟಿಹಾಕಿ, ಅವರ ಬಾಯಿಯೊಳಗೆ ಬಟ್ಟೆಯನ್ನು ತುರುಕಿ, ಮನೆಯಲ್ಲಿದ್ದ ನಗನಟ್ಟು, ಹಣ, ಬೆಲೆಬಾಳುವ ಪಾತ್ರೆಗಳನ್ನೆಲ್ಲ ಮೂಟೆ ಕಟ್ಟಿಕೊಂಡು ಅಲ್ಲಿಂದ ಹೊರಗೆ ಹೊರಟರು.

ಆ ರಾತ್ರಿಯಲ್ಲಿ ಆ ಮೂಟೆಯನ್ನು ಒಂದು ಕಡೆಯಲ್ಲಿ ಹುಗಿದಿಟ್ಟು, ಕಳ್ಳತನದ ಗದ್ದಲವೆಲ್ಲ ಅಡಗಿದ ಮೇಲೆ, ಸಾವಕಾಶವಾಗಿ ಹಂಚಿಕೊಳ್ಳುವುದು ಒಳ್ಳೆಯದೆಂದುಕೊಂಡು, ಅವರು ಒಂದು ಹಳ್ಳ ಪ್ರದೇಶಕ್ಕೆ ಹೋದರು. ಅಲ್ಲಿ ಚಿಕ್ಕ ಗುಂಡಿ ತೋಡಿ ಮೂಟೆಯನ್ನು ಅದರಲ್ಲಿಟ್ಟು ಮೇಲೆ ಮಣ್ಣು ಮುಚ್ಚಿ ಕಸಗಪ್ಪುಗಳನ್ನು ಪೇರಿಸಿಟ್ಟರು. ಆಮೇಲೆ ಎಲ್ಲರೂ ಒಟ್ಟಿಗೆ ಹೋಗುವುದು ಒಳ್ಳೆಯದಲ್ಲವೆಂದುಕೊಂಡು ತಲಾ ಒಂದೊಂದು ದಿಕ್ಕಿಗೆ ಹೊರಟು ಹೋದರು.

ಆ ಮೂವರು ಕಳ್ಳರಿಗೂ ಒಂದೇ ಬಗೆಯ ಆಲೋಚನೆ ಬಂದಿತ್ತು. ಅದರಂತೆ ಇಡುಂಬನು ಸ್ವಲ್ಪ ದೂರ ಹೋಗುವಷ್ಟರಲ್ಲಿ ಒಂದು ಬಾವಿ ಕಾಣಿಸಿತು. ಅದು ಇಳಿದು ನೀರು ತೋಡಿಕೊಳ್ಳುವಂತಹ ಬಾವಿ. ಅವನು ಅದರೊಳಗೆ ಇಳಿದು ಒಂದು ಮೆಟ್ಟಿಲಲ್ಲಿ ಕುಳಿತನು. ಮೂರನೇ ಜಾಮದಲ್ಲಿ ಆ ಮೂಟೆಯನ್ನು ತೆಗೆದುಕೊಂಡು ಹೋಗಬೇಕೆಂಬುದು ಅವನ ಗತ್ತು.

ಕಡುಂಬನು ಹೋದ ದಿಕ್ಕಿನಲ್ಲಿ ಒಂದು ಮನೆಯನ್ನು ಕಟ್ಟಿಸುತ್ತಿದ್ದರು. ಅರ್ಧ ಗೋಡೆ ಎದ್ದಿತ್ತು. ಅಲ್ಲಲ್ಲಿ ಇಟ್ಟಿಗೆಗಳನ್ನು ಪೇರಿಸಿಡಲಾಗಿತ್ತು.

ಇಡುಂಬನಿಗಿದ್ದ ಉದ್ದೇಶದಲ್ಲಿಯೇ ಇದ್ದ ಕಡುಂಬನು, ಸ್ವಲ್ಪಹೊತ್ತು ಅಡಗಿರಲು, ಆ ಇಟ್ಟಿಗೆಗಳ ಮರೆಯಲ್ಲಿ ಕುಳಿತನು. ಕುಳಿತವನು ಕೆಲವು ಇಟ್ಟಿಗೆಗಳನ್ನು ಮೂಟೆ ಕಟ್ಟಿ, ಹೆಗಲಲ್ಲಿಟ್ಟುಕೊಂಡು ಆ ಹಳ್ಳ ಪ್ರದೇಶಕ್ಕೆ ಹಿಂದಿರುಗಿ ಹೋಗಿ, ಅಲ್ಲಿ ಹುಗಿದಿದ್ದ ಕಳವಿನ ಸೊತ್ತಿನ ಮೂಟೆಯನ್ನು ಎಬ್ಬಿಸಿ ತೆಗೆದನು. ಮೊದಲು ಅದನ್ನು ಎಲ್ಲಿಯಾದರೂ ಅಡಗಿಸಿಟ್ಟು, ಅದರ ಸ್ಥಾನದಲ್ಲಿ ಇಟ್ಟಿಗೆಗಳ ಮೂಟೆಯನ್ನಿಟ್ಟು ಉಳಿದಿಬ್ಬರನ್ನು ಬೆಪ್ಪು ಪಡಿಸಬೇಕೆಂದುಕೊಂಡು, ಸೊತ್ತಿನ ಮೂಟೆಯನ್ನೆತ್ತಿಕೊಂಡು ಹೊರಟನು. ಅಲ್ಲಿ ಇಳಿಬಾವಿಯೊಂದಿರುವುದು ಅವನಿಗೆ ಗೊತ್ತು. ಅದರ ನೀರು ಕೆಟ್ಟುದರಿಂದ ಯಾರೂ ಉಪಯೋಗಿಸುವುದಿಲ್ಲ. ಅಂತಲೇ ಅವನು ಸೊತ್ತಿನ ಮೂಟೆಯನ್ನು ಆ ಬಾವಿಯೊಳಗೆ ಹಾಕಿಬಿಟ್ಟನು.

ಆ ಬಾವಿಯ ಮೆಟ್ಟಲಲ್ಲಿ ತೂಕಡಿಸಿಕೊಂಡಿದ್ದ ಇಡುಂಬನ ತಲೆಯ ಮೇಲೆ ಆ ಮೂಟೆ ಬಿದ್ದು, ಬಾವಿಯ ತಳದಲ್ಲಿರುವ ಸ್ವಲ್ಪ ನೀರಿಗೆ ಹೊರಳಿಬಿತ್ತು. ಇಡುಂಬನೂ ತಲೆಯ ಪೆಟ್ಟಿನಿಂದ ಬೋದ ತಪ್ಪಿ ಆ ಸ್ವಲ್ಪ ನೀರಿಗೆ ಬಿದ್ದನು.

ಇದಾವುದನ್ನೂ ಅರಿಯದ ಕಡುಂಬನು ಹಳ್ಳದ ಕಡೆಗೆ ಹಿಂದಿರುಗಿ ಬಂದು ಇಟ್ಟಿಗೆಯ ಮೂಟೆಯನ್ನು ಗುಂಡಿಯಲ್ಲಿ ಹುಗಿಯಲು ಎತ್ತಿದನು.

ಅಷ್ಟರೊಳಗೆ ಅದೇ ದುರುದ್ದೇಶದಿಂದಿದ್ದ ಮೂರನೆಯವನಾದ ದುಡುಂಬನು, ಆ ಪ್ರದೇಶಕ್ಕೆ ಬಂದು, ಬಗ್ಗಿ ಮೂಟೆ ಎತ್ತಿಕೊಂಡಿದ್ದ ಕಡುಂಬನನ್ನು ನೋಡಿ, "ಕಳ್ಳ ಭಂಡ ! ಎಲ್ಲಾ ಸೊತ್ತು ದಕ್ಕಿಸಿಕೊಳ್ಳುತ್ತೀಯಾ ?" ಎನ್ನುತ್ತ ದೊಣ್ಣೆಯಿಂದ ಅವನ ತಲೆಗೊಂದು ಕೊಟ್ಟನು. ಕಡುಂಬನು ಅಲ್ಲೇ ಸ್ಮೃಹೆ ತಪ್ಪಿ ಬಿದ್ದನು.

ಕೂಡಲೇ ದುಡುಂಬನು ಆ ಇಟ್ಟಿಗೆ ಮೂಟೆಯನ್ನೆತ್ತಿಕೊಂಡು ಮನೆಕಟ್ಟುತ್ತಿದ್ದ ಪ್ರದೇಶದ ದಿಕ್ಕಿಗೇ ಓಡಿದನು. ಅಲ್ಲಿ ಮಲಗಿದ್ದ ಕಾವಲಿನವನು ಎಚ್ಚೆತ್ತು, "ಯಾರೋ ಅದು ಕಳ್ಳಾ !" ಎನ್ನುತ್ತ ದುಡುಂಬನ ಕಾಲುಗಳ ಮೇಲೆ ದಪ್ಪದ ದೊಣ್ಣೆಯಿಂದ ಹೊಡೆದನು. ಮಗುಚಿ ಬಿದ್ದನು ದುಡುಂಬ. ಕಾವಲುಗಾರನು ಅವನ ಕೈಯಲ್ಲಿದ್ದ ಮೂಟೆಯನ್ನು ಬಿಚ್ಚಿ ನೋಡಲು, ಅದರಲ್ಲಿ ಇಟ್ಟಿಗೆಗಳು ! ಅವನು ಇಟ್ಟಿಗೆ ಕಳ್ಳನನ್ನು ಹಿಡಿದುದರಿಂದ, ಒಡೆಯನ ಮೆಚ್ಚುಗೆ ಪಡೆಯಬಹುದೆಂದುಕೊಂಡನು.

ಬೆಳಗಾದ ಮೇಲೆ ಹಳ್ಳದಲ್ಲಿ ಬಿದ್ದಿದ್ದ ಕಡುಂಬನೂ, ಬಾವಿಯಲ್ಲಿ ನರಳುತ್ತಿದ್ದ ಇಡುಂಬನೂ ಸಿಕ್ಕಿಬಿದ್ದು, ದುಡುಂಬನೂ ಅವರ ಜತೆಗಾರನೆಂದು ಗೊತ್ತಾಗಿ, ಕಳ್ಳತನದ ಸೊತ್ತು ಹರಿದಾಸರಿಗೇ ಹಿಂದಿರುಗಿತು. ಅವರು ಹೇಳಿದ ಮಾತು ಅಕ್ಷರಶಃ ನಿಜವಾಯಿತು.





# ಕಡೆಗೆ ಬುದ್ಧಿ ಬಂತು

**ಒಂ**ದು ಊರಿನಲ್ಲಿ ರಂಗಯ್ಯನೆಂಬವನು, ಸಂತೆಗೆ ಹೋಗಿ ಎರಡು ಹೋರಿಕರುಗಳನ್ನು ಕೊಂಡು ಕೊಂಡನು. ಅವುಗಳನ್ನು ಜತೆಯಾಗಿ ತನ್ನ ಹಟ್ಟಿಯಲ್ಲಿ ಕಟ್ಟಿ, ಒಂದಕ್ಕೆ ರಾಮು, ಇನ್ನೊಂದಕ್ಕೆ ಭೀಮ ಎಂದು ಹೆಸರಿಟ್ಟು ತನ್ನ ವ್ಯವಸಾಯದ ಕೆಲಸಕ್ಕೆ ಪಳಗಿಸಿಕೊಂಡು ಬರುತ್ತಿದ್ದನು.

ರಾಮನು ಒಳ್ಳೇ ಬುದ್ಧಿಯ ಹೋರಿಕರು. ಅದು ವಿಧೇಯತೆಯಿಂದ ರಂಗಯ್ಯನು ಹೇಳಿದಂತೆ ಕೇಳುತ್ತ ಸುಲಭವಾಗಿ ಕೆಲಸಗಳನ್ನು ಕಲಿತುಕೊಳ್ಳುತ್ತಿದ್ದಿತು. ಆದರೆ ಭೀಮ ಹೋರಿ ಬಹುಳ ತುಂಟು. ಉಳುವಾಗ ನೊಗದಿಂದ ಕಳಚಿಕೊಳ್ಳುವುದೂ, ಗಾಡಿಗೆ ಕಟ್ಟಿದರೆ ನೊಗ ಕುತ್ತಿಗೆಗೆ ಬೀಳದಂತೆ ತಟಪಟಾಯಿಸುವುದೂ ಹೀಗೆ ತುಂಬಾ ತೊಂದರೆ ಕೊಡುತ್ತಿತ್ತು. ಮೇಯಲು ಬಿಟ್ಟರೆ ಆಗಾಗ ಯಾರಾರ ಹೊಲಗದ್ದೆಗಳಿಗೆ ನುಗ್ಗುತ್ತಿತ್ತು. ಅದನ್ನು ನೋಡಿಕೊಳ್ಳುವುದೇ ದೊಡ್ಡ ಕೆಲಸವಾಯಿತು. ಆದರೆ ತೀನಿ ಮಾತ್ರ ಚೆನ್ನಾಗಿ ತಿನ್ನುತ್ತಿತ್ತು.

ಆರು ತಿಂಗಳು ಕಳೆದರೂ ಭೀಮನು ದಾರಿಗೆ ಬರಲಿಲ್ಲ. ಹೊಲಗದ್ದೆಗಳಲ್ಲಿ ಬೇಸಾಯದ ಕೆಲಸವು ತುರ್ತಾಗಿ ನಡೆಯಬೇಕಾದ ಕಾಲವು ಸಮೀಪಿಸುತ್ತಿದೆ. ಕಬ್ಬಿನ ಗದ್ದೆ ಬೆಳೆದು ಸಿದ್ಧವಾಗಿದೆ. ಬೇಗದಲ್ಲಿ ಕಬ್ಬನ್ನು ಕೊಯಿದು ಗಾಡಿಗಳಲ್ಲಿ ಕಳುಹಿಸಿ ಬೆಲ್ಲದ ಗಾಣಕ್ಕೆ ಕೊಡಬೇಕು. ಗೊಬ್ಬರವನ್ನು ಸಾಗಿಸಬೇಕು. ಎತ್ತುಗಳು ಸರಿಯಾಗಿಲ್ಲದಿದ್ದರೆ ಇವೆಲ್ಲಾ ಹೇಗೋ ?

ಭೀಮನನ್ನು ದಾರಿಗೆ ತರುವುದರ ಬಗೆಗೆ ತುಂಬಾ ಆಲೋಚನೆ ಮಾಡಿ ರಂಗಯ್ಯನು, ಭೀಮನನ್ನು, ಗಾಣಿಗರ ಎಲ್ಲಪ್ಪನಿಗೆ ಕೊಟ್ಟು, ಎರಡುದಿನ ಗಾಣಕ್ಕೆ ಕಟ್ಟಿ ಬುದ್ಧಿ ಕಲಿಸುವಂತೆ ಹೇಳಿದನು.

ಇಡೀದಿನ ಗಾಣದ ಚಕ್ರ ಸುತ್ತಿನಲ್ಲಿ ತಿರುಗಿ ಪ್ರಪಂಚವೇ ಅಂಧಕಾರವಾದಂತೆನಿಸಿತು ಭೀಮನಿಗೆ. ಅದರೊಂದಿಗೆ ತನ್ನ ಜತೆಗಾರ ರಾಮನಿಲ್ಲದ ಬೇಸರ. ತಿರುಗಲಾರೆನೆಂದು ನಿಂತರೆ ಗಾಣಿಗ ಎಲ್ಲಪ್ಪನ ಖಾರವಾದ ಬಾರು ಕೋಲಿನ ಹೊಡೆತ. ಎರಡು ದಿನಗಳು ಎರಡು ಯುಗಗಳಂತೆ ಕಳೆಯಿತು ಭೀಮನಿಗೆ.

ಮೂರನೇದಿನ ರಂಗಯ್ಯ ಭೀಮನನ್ನು ಒಂಟೆತ್ತಿನ ಗಾಡಿ ನಡೆಸುವ ವೀರಣ್ಣನಿಗೆ ಕೊಟ್ಟು ಎರಡುದಿನ ಉಪಯೋಗಿಸಿ ಬುದ್ಧಿ ಕಲಿಸುವಂತೆ ಹೇಳಿದನು. ಜೋಡೆತ್ತಿನ ಗಾಡಿಯ ನೊಗದಂತೆ ಒಂಟೆತ್ತಿನ

ಆರ್. ಎಸ್. ನಾರಾಯಣ

ಗಾಡಿಯನೊಗದಿಂದ ತಪ್ಪಿಸಿಕೊಳ್ಳಲು ಸೌಕರ್ಯ ವಾಗಲಿಲ್ಲ ಭೀಮನಿಗೆ. ಭಾರವಾದ ಗೊಬ್ಬರದ ಹೆಡಿಗೆಗಳನ್ನೂ, ಬೂದಿಯ ಚೀಲಗಳನ್ನೂ, ಪಟೇಲರ ಮನೆಗೂ, ಶಾನುಭೋಗರ ಮನೆಗೂ, ಮತ್ತೆ ಕೆಲವು ಮನೆಗಳಿಗೂ ಸರಬರಾಯಿ ಮಾಡುವ ಕೆಲಸ. ಒಂಟೆತ್ತಿನ ಗಾಡಿಯಲ್ಲಿ ಭೀಮನೇ ಮಾಡಬೇಕಾಯಿತು. ಭೀಮನಿಗೆ ಎರಡು ದಿನಗಳೂ ಯಮಯಾತನೆ !

ವೀರಣ್ಣನ ಬಳಿಯಲ್ಲಿ ಎರಡು ದಿನಗಳಿದ್ದ ಮೇಲೆ ರಂಗಯ್ಯ ಭೀಮನನ್ನು ಅಗಸರ ವೆಂಕಟುವಿಗೆ ಕೊಟ್ಟು ಎರಡುದಿನ ಬುದ್ಧಿ ಕಲಿಸಲು ಹೇಳಿದನು. ವೆಂಕಟುವಿನ ಬಳಿಯಲ್ಲಿ ಭೀಮನು ಕೊಳೆಬಟ್ಟೆಗಳ ಒದ್ದೆ ಭಾರಗಳ ಮೂಟೆಯನ್ನು ಹೊತ್ತು ಬಿಸಿಲಿನಲ್ಲಿ ತಿರುಗಬೇಕಾಯಿತು. ಇದಕ್ಕಿಂತ ಗಾಣದಲ್ಲಿ ತಿರುಗುವುದೇ ಮೇಲೆನಿಸಿತು ಭೀಮನಿಗೆ. ಏಕೆಂದರೆ ಅದು ನೆರಳಲ್ಲಿ ಮಾಡುವ ಕೆಲಸವಾಗಿತ್ತು. ಈಗ ಬಾಯಿಯಿಂದ ನೊರೆ ಬರುತ್ತಿದ್ದರೂ ವೆಂಕಟು ಬಿಡುತ್ತಿರಲಿಲ್ಲ. ಎರಡುದಿನ ಬಿಸಿಲಿನಲ್ಲಿ ಭೀಮನು ಸೋತು ಹೋದ.

ಆಮೇಲೆ ರಂಗಯ್ಯ ಭೀಮನನ್ನು ತೋಟದ ನಾರ್ಣಪ್ಪನಿಗೆ ಕೊಟ್ಟು ಎರಡು ದಿನಗಳವರೆಗೆ ಉಪಯೋಗಿಸಲು ಹೇಳಿದನು. ನಾರ್ಣಪ್ಪನು ಬಾವಿಗೆ ಏತ ಹಾಕಿ ನೀರೆತ್ತಿ ತೋಟಕ್ಕೆ ಹಾಯಿಸುವವನು. ಇದು ಇನ್ನಷ್ಟು ಕಷ್ಟವಾದ ಕೆಲಸ. ಭೀಮನು ಏತವನ್ನು ಎಳೆದುಕೊಂಡು ಮುಂದೆ ಹೋದರೆ ನೀರು ತುಂಬಿದ ಏತದ ಮರಿಗೆ ಮೇಲೆ ಬರುತ್ತದೆ. ಮತ್ತೆ ಭೀಮನು ಹಿಂದೆ ಹಿಂದೆ ಬರಬೇಕು. ಆಗ ಏತದ ಮರಿಗೆ ನೀರಿಗಿಳಿಯುತ್ತದೆ. ಈವಿಧವಾಗಿ ತೋಟದ ನಾರ್ಣಪ್ಪ ಬೆಳಗಿನಿಂದ ಸಂಜೆಯವರೆಗೂ ಹಿಂದಕ್ಕೂ ಮುಂದಕ್ಕೂ ನಡೆಸಿದನು.

ಎರಡನೇ ದಿನ ಸಾಯಂಕಾಲ ರಂಗಯ್ಯ ಬಂದು ಭೀಮನನ್ನು ತನ್ನ ಮನೆಗೆ ಹೊಡೆದುಕೊಂಡು ಹೋದನು. ಎಂಟು ದಿನಗಳ ಅನಂತರ ತನ್ನ ಗೆಳೆಯ ರಾಮನ ಬಳಿಗೆ ಬಂದ ಕೂಡಲೇ ಭೀಮನಿಗೆ ಅತ್ಯಾನಂದ ಉಕ್ಕಿತು. ಬದುಕಿದೆನಪ್ಪಾ ಎನಿಸಿತು. ಬೇರೆಯವರಿಗಿಂತ ತನ್ನ ಯಜಮಾನನೇ ತನ್ನ ಮೇಲೆ ಆಸಕ್ತಿಯಿಂದ ಹೊತ್ತು ಹೊತ್ತಿಗೆ ಅಕ್ಕಚ್ಚೂ, ಹುಲ್ಲೂ ಹಾಕುತ್ತಿದ್ದರೆ ತುಂಬ ಹಾಯಾಗಿದೆ ಅನಿಸಿತು. ರಂಗಯ್ಯ ಬಿಸಿಲಿನಲ್ಲಿ ಸಿಕ್ಕಾಬಟ್ಟೆ ದುಡಿಸುವುದಿಲ್ಲ. ಯಾವಾಗಲೂ ನೆರಳಿನಲ್ಲೇ ಕಟ್ಟಿಹಾಕುತ್ತಾನೆ. ಈಗ ಭೀಮನಿಗೆ ಬುದ್ಧಿ ಬಂದಿತ್ತು. ರಾಮನೊಂದಿಗೆ ಸರಿಸಮನಾಗಿ ದುಡಿಯುತ್ತ ರಂಗಯ್ಯನನ್ನು ಮೆಚ್ಚಿಸಿದ.



# ಮಗನಿಗಾಗಿ

ವಿಜಯದುರ್ಗವೆಂಬ ಊರಿನಲ್ಲಿ ವಿಶ್ವಾಚಾರಿ ಎಂಬ ದೊಡ್ಡ ವೈದ್ಯನಿದ್ದ. ಅವನಿಗೆ ವೈದ್ಯಕೀಯಕ್ಕೆ ಸಂಬಂಧಿಸಿದ ಎಲ್ಲಾ ಭೇಷಜಗಳೂ ಗೊತ್ತಿದ್ದುವು. ತನ್ನ ಮಗನೂ ತನ್ನಂಥವನೇ ಆಗ ಬೇಕೆಂದು ತನ್ನ ವಿದ್ಯೆಗಳನ್ನೇ ಮಗನಿಗೂ ಕಲಿಸಿಕೊಡುತ್ತಿದ್ದನು.

ಹೀಗಿರುವಾಗ ವಿಶ್ವಾಚಾರಿಗೆ ದೊಡ್ಡ ರೋಗವು ಅಂಟಿಕೊಂಡಿತು. ತನ್ನ ವೈದ್ಯಗಳಾವುದೂ ಅವನಿಗೆ ನಾಟಲಿಲ್ಲ. ತನಗೆ ಮರಣವು ಖಂಡಿತವೆಂದು ಗೊತ್ತಾಯಿತು. ಇನ್ನೊಬ್ಬ ವೈದ್ಯನಿಂದ ಚಿಕಿತ್ಸೆ ಮಾಡಿಕೊಂಡರೆ, ತನ್ನ ಖ್ಯಾತಿ ಹೋಗುವುದಲ್ಲದೆ, ತನ್ನ ಮಗನ ಭವಿಷ್ಯತ್ತೂ ಹಾಳಾಗುತ್ತದೆಂದುಕೊಂಡು, ಅವನು ತನಗೆ ತಿಳಿದ ವೈದ್ಯವನ್ನೇ ತನ್ನ ಮಗನಿಂದ ಮಾಡಿಸಿಕೊಳ್ಳುತ್ತ, ಮರಣವನ್ನು ಇದಿರು ನೋಡಿಕೊಂಡಿದ್ದನು.

ವಿಶ್ವಾಚಾರಿ ಸಾವಿನ ಅಂಚಿನಲ್ಲಿರುವ ಸಮಾಚಾರ ಕೇಳಿ, ನೆರೆಯೂರಿನ ಶರಭಾಚಾರಿ ಎಂಬ ವೈದ್ಯನು ಅವನನ್ನು ನೋಡಲು ಬಂದನು. ವಿಶ್ವಾಚಾರಿ ಹೋಗಿ ಬಿಟ್ಟರೆ ಅವನ ಸ್ಥಾನವನ್ನು ತಾನು ವಶಪಡಿಸಿಕೊಳ್ಳ ಬೇಕೆಂಬುದು ಶರಭಾಚಾರಿಯ ಉದ್ದೇಶವೆಂಬುದನ್ನು ವಿಶ್ವಾಚಾರಿ ಬಲ್ಲನು. ಅಂತಲೇ ಅವನು ಬಂದಕೂಡಲೇ ವಿಶ್ವಾಚಾರಿ ತನ್ನ ಎಲ್ಲಾ ಶಕ್ತಿಯನ್ನೂ ಒಗ್ಗೂಡಿಸಿ ಎದ್ದು ಕುಳಿತು, ತನ್ನ ಮಗನು ತನ್ನ ರೋಗಕ್ಕೆ ಅತ್ಯದ್ಭುತವಾಗಿ ಚಿಕಿತ್ಸೆ ನಡೆಸುತ್ತಿದ್ದಾನೆಂದು ಶರಭಾಚಾರಿಯೊಂದಿಗೆ ಮಾತಾಡಿದನು. ಶರಭಾಚಾರಿ ಸಂತೋಷ ಪ್ರಕಟಿಸಿ ವಿಜಯ ದುರ್ಗದಲ್ಲಿ ತಾನು ನೆಲೆಯೂರುವ ಆಲೋಚನೆ ಬಿಟ್ಟು, ಹೊರಟು ಹೋದನು.

ವಿಶ್ವಾಚಾರಿ ಆಶ್ಚರ್ಯದಿಂದ ನೋಡುವ ತನ್ನ ಮಗನೊಂದಿಗೆ, "ನಿನ್ನನ್ನು ಕುರಿತು ಅವನಿಗೆ ದೊಡ್ಡ ಅಭಿಪ್ರಾಯ ಬರಬೇಕೆಂತಲೇ ಹಾಗೆ ಹೇಳಿದೆ. ಇಲ್ಲದಿದ್ದರೆ ಅವನು ಈ ಊರಿಗೆ ಬಂದು ನೆಲೆಸಿ ನಿನಗೆ ಗತಿ ಇಲ್ಲದ ಹಾಗೆ ಮಾಡುತ್ತಾನೆ ಗೊತ್ತಾ ? " ಎಂದು ಹೇಳಿ, ಹಿಂದಕ್ಕೆ ಬಿದ್ದು ಪ್ರಾಣ ಬಿಟ್ಟನು.





# ಪಿಶಾಚಿಗಳ ಸಹಾಯ

ಒಂದು ಊರಿನಲ್ಲಿ ಜಿಪುಣನೂ ಧನಿಕನೂ ಆದ ಕನಕರಾಜು ಎಂಬವನಿಗೆ ಒಬ್ಬಳು ಮಗಳು ಬೆಳೆದು ದೊಡ್ಡವಳಾದಳು. ಅವಳಿಗೆ ಮದುವೆಯು ನಿಶ್ಚಯವೂ ಆಯಿತು. ಆದರೆ ಮಗಳ ಮದುವೆಯನ್ನು ತನ್ನ ಊರಿನಲ್ಲೇ ಮಾಡಿಬಿಟ್ಟರೆ ಊರವರನ್ನೆಲ್ಲಾ ಕರೆಯಬೇಕಾಗುತ್ತೆ; ಹೆಚ್ಚು ಹಣ ಖರ್ಚು ಮಾಡಬೇಕಾಗುತ್ತೆ. ಅದಕ್ಕಾಗಿ ಲೋಭಿಯಾದ ಕನಕರಾಜು ಬೇರೊಂದು ಊರಿನಲ್ಲಿ ಮದುವೆ ನಡೆಸಲು ಏರ್ಪಾಡು ಮಾಡಿದನು. ಕೇಳಿದವರ ಹತ್ತಿರ ಗಂಡಿನ ಕಡೆಯವರು ಹಾಗೆ ಮಾಡಲು ಹೇಳಿದ್ದಾರೆಂದೂ ಹೇಳಿದನು.

ಮದುವೆಯ ದಿನಕ್ಕೆ ಎರಡು ದಿನಗಳ ಮುಂಚಿತವಾಗಿ ಮದುವೆಯ ಸನ್ನಾಹಗಳನ್ನು ಅಣಿಗೊಳಿಸಲು ತನ್ನ ಮಗನನ್ನು ಕಳುಹಿಸಿದನು. ಆಮೇಲೆ ಮದುವೆಯ ಮುಂಚಿನ ದಿನ ತಾವೆಲ್ಲರೂ ಹೊರಟು ಬರುವುದಾಗಿ ಹೇಳಿದನು. ಅದರಂತೆ ತನ್ನ ಮಗಳನ್ನೂ ಹೆಂಡತಿಯನ್ನೂ, ಅತಿ ಮುಖ್ಯರಾದ ಬಂಧುಗಳನ್ನೂ ಕರೆದುಕೊಂಡು ಜೋಡೆತ್ತಿನ ಗಾಡಿಯಲ್ಲಿ ಪ್ರಯಾಣ ಹೊರಟನು.

ಸಾಧಾರಣವಾಗಿ ಅವರು ಆ ದಿನ ರಾತ್ರಿಗೆ ಗಮ್ಯಸ್ಥಾನವನ್ನು ಸೇರಿಬಿಡಬೇಕಿತ್ತು. ಆದರೆ ದಾರಿಯಲ್ಲಿ ಒಂದು ಎತ್ತಿಗೆ ರೋಗ ಬಂದಿತು. ಅದನ್ನು ಯಾರ ಮನೆಯಲ್ಲಿಯೋ ಬಿಟ್ಟು, ಮತ್ತೊಂದು ಎತ್ತನ್ನು ತಂದುಕೊಂಡು ಕಾಲಯಾಪನೆ ಮಾಡಬೇಕಾಗಿ ಬಂದುದರಿಂದ, ಹೊತ್ತು ಮುಳುಗಿ ಕತ್ತಲೆಯಾಗುವಾಗ ಅವರು ಅರ್ಧದಾರಿ ಕೂಡಾ ಕ್ರಮಿಸಿರಲಿಲ್ಲ.

ತನ್ನ ಮಗನು ಆ ಊರಿನ ಸತ್ರಕ್ಕೆ ಬಾಡಿಗೆ ಕೊಟ್ಟು, ಅಡಿಗೆ ಕೂಡಾ ಮಾಡಿಸಿಟ್ಟಿದ್ದಾನು. "ಎಲ್ಲಾ ದಂಡವಾಯಿತು!" ಎಂದು ಕನಕರಾಜು ಒಳಗೊಳಗೇ ಸಂಕಟಪಡುತ್ತಿರಲು, ಮಳೆಬರಲು ಶುರುವಾಯಿತು.

ದಾರಿ ಪೂರಾ ಕೆಸರೂ ಮಣ್ಣೂ ಆಯಿತು. ಗಾಡಿ ಸಾಗುತ್ತಾ ಇರಲು ಸ್ಮಶಾನದಾಚೆಯಿಂದ ನರಿಗಳ ಊಳು ಕೇಳಿಸಿತು. ಗುಮ್ಮೋ ಹಕ್ಕಿಗಳ ಗೂಂಕಾರವೂ ಹೊರಟು ಭಯ ಹುಟ್ಟಿಸಿತು. ಕೆಸರು ಗಂಜಳದ ದಾರಿಯಲ್ಲಿ ಹೋಗುತ್ತಿದ್ದ ಗಾಡಿ, ಅಕಸ್ಮಾತ್ತಾಗಿ ಒಂದು ಬದಿಗೆ ಒರಗಿತು. ಆ ಬದಿಯ ಚಕ್ರವು ಕೆಸರಿನ ಹೊಂಡದೊಳಗೆ ಚೆನ್ನಾಗಿ ಹುದುಗಿತು.

ಎಂ. ಕೆ. ಈಶ್ವರರಾವ್

ಎಲ್ಲರೂ ಬೇಗಬೇಗನೇ ಗಾಡಿಯಿಂದಿಳಿದು ಹೊಂಡದೊಳಗಿನಿಂದ ಚಕ್ರವನ್ನು ಮೇಲೆತ್ತಲು ಪ್ರಯತ್ನಿಸಿದರು. ಎಷ್ಟು ಆಯಾಸ ಪ್ರಯಾಸ ಪಟ್ಟರೂ ಸಾಧ್ಯವಾಗಲಿಲ್ಲ.

ಅಷ್ಟರಲ್ಲಿ ಕನಕರಾಜುಗೆ ಪಕ್ಕದಲ್ಲೇ ಏನೋ ಕೋಲಾಹಲ ಶಬ್ದ ಕೇಳಿಸಿತು. ಗಾಡಿಯ ಗೂಡಿನ ಮೇಲೆ ಯಾರೋ ಧುಮುಕಿದಂತೆ ತೋರಿತು.

ಕನಕರಾಜು ಮೇಲೆ ನೋಡಿ ಥಕ್ಕನೆ ಗಾಬರಿ ಬಿದ್ದನು. ಗಾಡಿಗೂಡಿನ ಮಾಡಿನಲ್ಲಿ ಕುಳ್ಳ ಪಿಶಾಚಿಗಳು ಸೇರಿ ಲಾಗ ಹಾಕುತ್ತಿದ್ದುವು, ಅವುಗಳ ಕುಳ್ಳರೂಪು ನೋಡಿ ಕನಕರಾಜು ಧೈರ್ಯ ತಂದುಕೊಂಡು, "ಯಾರು ನೀವೆಲ್ಲ ?" ಎಂದು ಕೇಳಿದನು.

"ಕಾಣೋದಿಲ್ಲಾ ? ನಾವೆಲ್ಲಾ ಕುಳ್ಳ ಪಿಶಾಚಿಗಳು ! ನೀವೆಲ್ಲಾ ಈ ಸುಡುಗಾಡಿಗೆ ಏನು ಕೆಲಸಕ್ಕಾಗಿ ಬಂದಿರಿ ?" ಎಂದು ಪಿಶಾಚಿಗಳು ಕೇಳಿದುವು.

"ಸುಡುಗಾಡಿಗೆ ಬರುವ ಕರ್ಮ ನಮಗೇನೂ ಬಂದಿಲ್ಲ. ನಾಳೆ ಬೆಳಗಾದರೆ ನನ್ನ ಮಗಳ ಮದುವೆ. ಅದಕ್ಕೇ ಹೊರಟಿದ್ದೇವೆ" ಎಂದ ಕನಕರಾಜು.

"ಮದುವೇ ! ಮದುವೆ ! ಲಡ್ಡು ! ಹೋಳಿಗೆ ! ಗಮ್ಮತೋಯ್ ಗಮ್ಮತೂ !" ಎಂದು ಹೇಳಿಕೊಂಡು ಕುಳ್ಳ ಪಿಶಾಚಿಗಳು ನರ್ತಿಸ ತೊಡಗಿದುವು.

"ಏನು ಮದುವೆಯೋ ! ಗಾಡಿ ಕೆಸರಿನ ಗುಂಡಿಯಲ್ಲಿ ಸಿಕ್ಕಿಕೊಂಡು ಹೋಗಿದೆ. ಅದನ್ನು ಮೇಲೆಬ್ಬಿಸಿ ಸಮಯಕ್ಕೆ ಸರಿಯಾಗಿಹೋದರೆತಾನೇ ಮದುವೆ ?" ಎಂದ ಕನಕರಾಜು ಬೇಸರದಿಂದ.

"ನೀನು ಮದುವೆಗೆ ನಮ್ಮನ್ನು ಕರಕೊಂಡು ಹೋಗೋಹಾಗಿದ್ದರೆ ನಾವು ಕ್ಷಣ ಮಾತ್ರದಲ್ಲಿ ಗಾಡೀನ ಮೇಲೆತ್ತಿ ಓಡಿಸಿಬಿಡುತ್ತೇವೆ. ಆಗಬಹುದಾ ?" ಎಂದು ಕೇಳಿದುವು ಕುಳ್ಳ ಪಿಶಾಚಿಗಳು.

"ಹಾಗೇ ಮಾಡಿ. ನಿಮ್ಮನ್ನು ಕೂಡಾ ಕರೆದುಕೊಂಡು ಹೋಗುತ್ತೇನೆ." ಎಂದ ಕನಕರಾಜು.

ಪಿಶಾಚಿಗಳು ನಿಮಿಷ ಮಾತ್ರದಲ್ಲಿ ಗಾಡಿಯನ್ನು ಕೆಸರುಗುಂಡಿಯಿಂದ ಮೇಲೆತ್ತಿ ಎಳೆದು ದಾರಿಗೆ ಬಿಟ್ಟವು. ಕನಕರಾಜು ಮುಂತಾದವರೆಲ್ಲಾ ಗಬಗಬನೆ



ಗಾಡಿಯೊಳಗೇರಿಕೊಂಡರು. ಗಾಡಿ ಇಮ್ಮಡಿ ವೇಗದಿಂದ ಗಡಗಡನೆ ಸಾಗತೊಡಗಿತು.

"ಏನೊಂದ್ರೆ ನೀವು? ಊರವರನ್ನೆಲ್ಲ ಬಿಟ್ಟು ಈ ಪಿಶಾಚಿಗಳನ್ನು ಮದುವೆಗೆ ಕರೆದುಕೊಂಡು ಹೋದರೆ ಏನಂದಾರು ಜನ?" ಎಂದು ಕನಕರಾಜುನ ಹೆಂಡತಿ ಗಂಡನ ಕಿವಿಯಲ್ಲಿ ತಿವಿದಳು.

"ನೀನೊಬ್ಬಳು ಹೆಡ್ಡಿ! ನಾವು ಆ ಊರು ಮುಟ್ಟುವಾಗ ಬೆಳಗಾಗುತ್ತದೆ. ಬೆಳಕು ನೋಡಿದ ಕೂಡಲೇ ಪಿಶಾಚಿಗಳೆಲ್ಲ ಓಡಿಬಿಡುತ್ತವೆ" ಎಂದ ಕನಕರಾಜು.

"ಗಾಡಿ ಓಡುವ ವೇಗ ನೋಡಿದರೆ ಕೋಳಿ ಕೂಗುವುದರೊಳಗೇ ನಾವು ಅಲ್ಲಿ ಸೇರಿಬಿಡುತ್ತೇವೆ. ಆಗ ಏನು ಮಾಡುತ್ತೀರಿ? ಈ ಪಿಶಾಚಿ ಅತಿಥಿಗಳಿಗೆ ಮರ್ಯಾದೆ ಮಾಡಲು ನನ್ನಿಂದಾಗದು. ಅದೆಲ್ಲಾ ನೀವೇ ನೋಡಿಕೋಬೇಕು ಮತ್ತೆ" ಎಂದಳು ಕನಕರಾಜುನ ಹೆಂಡತಿ.

"ಎಷ್ಟು ಪ್ರಾಯವಾದರೂ ಹೆಂಗಸರಿಗೆ ಆಲೋಚನೆಯ ಶಕ್ತಿಯಿಲ್ಲ. ಹಾಗೆ ಊರು ತಲಪಿಬಿಟ್ಟರೆ ಭದ್ರಕಾಳೀ ಗುಡೀಹತ್ತಿರ ಗಾಡಿನಿಲ್ಲಿಸಿ, ಈ ಭದ್ರಕಾಳೀ ಗುಡಿಯಲ್ಲೇ ಮದುವೆ. ಎಲ್ಲರೂ ಒಳಗೆ ಬನ್ನಿ ಅಂತ ಈ ಪಿಶಾಚಿಗಳ ಹತ್ತಿರ ಹೇಳುತ್ತೇನೆ. ಭದ್ರಕಾಳೀ ಹೆಸರು ಕೇಳಿದ್ದೇ ತಡ, ಪಿಶಾಚಿಗಳೆಲ್ಲ ಓಡೇ ಬಿಡುತ್ತವೆ, ಗೊತ್ತಾ?" ಎಂದು ಹೇಳಿ ಕನಕರಾಜು ಬಿದ್ದು ಬಿದ್ದು ಹೊಟ್ಟೆ ತುಂಬಾ ನಕ್ಕನು.

ಅವನ ಹೆಂಡತಿ ಗಂಡನ ಬುದ್ಧಿ ಮತ್ತೆಯನ್ನು ಮೆಚ್ಚಿದರೂ ಹೊರಗೆ ಸಿಟ್ಟನ್ನೇ ತೋರಿಸುತ್ತ, "ಸರಿ ಸರಿ! ಮೆಲ್ಲ ಮಾತಾಡಿ. ಅವುಗಳ ಕಿವಿಗೆ ಬಿದ್ದೀತು ನಿಮ್ಮ ಗೌಜಿ!" ಎಂದಳು.

ತರುವಾಯ ಅವರಿಗೆಲ್ಲ ತೂಕಡಿಕೆ ಬಂದಿತು. ಅರೆ ಮಯಕ ನಿದ್ದೆಯಲ್ಲಿರುವಾಗ ಗಾಡಿಯ ದೊಡ್ಡದೊಂದು ಅಲುಗಾಟಕ್ಕೆ ಎಚ್ಚರಾಯಿತು. ಆಗ ಪೂರ್ತಿ ಬೆಳಗಾಗಿತ್ತು.

ಗಾಡಿಯ ಅಲುಗಾಟದಿಂದ ಇಡೀ ದೇಹವು ನೋಯುತ್ತಿರಲು, ಕನಕರಾಜು ಕಣ್ಣುಗಳನ್ನು ಅಗಲವಾಗಿ ಬಿಡಿಸಿ ನೋಡಿದನು. ಪಿಶಾಚಿಗಳು ಕಾಣಲಿಲ್ಲ. ಗಾಡಿಯಿಂದಿಳಿದು ನೋಡಿದರೆ ಗಾಡಿ ಕೆಸರಿನ ಹೊಂಡದಲ್ಲೇ ಹುದುಗಿಕೊಂಡಿತ್ತು!

ಕನಕರಾಜು ಹೆಂಡತಿಯ ಮೇಲೆ ಕೋಪಿಸುತ್ತ, "ನೋಡಿದಿಯಾ? ನೀನು ನನ್ನನ್ನು ಅನಾವಶ್ಯಕವಾಗಿ ಮಾತಿಗೆಳೆದು ಹಾಳುಮಾಡಿದಿ. ನಮ್ಮ ಮಾತು ಕೇಳಿ ಆ ಪಿಶಾಚಿಗಳು ಬೆಳತನಕ ಗಾಡಿಯನ್ನು ಇಲ್ಲಿಯೇ ಸುತ್ತಾಡಿಸಿ ಈ ಹೊಂಡಕ್ಕೇ ದೂಡಿಬಿಟ್ಟಿವೆ! ಇನ್ನು ಅಳು ತಲೆ ಚಚ್ಚಿಕೊಂಡು!" ಎಂದು ಹೆಂಡತಿಯ ಮೇಲೆಯೇ ತಪ್ಪು ಹಾಕಿದನು.





# ನಂಬುಗೆಯ ಕೆಡುಕು

ರತ್ನಪುರದಲ್ಲಿ ಧನಗುಪ್ತನೆಂಬ ವರ್ತಕನು ಬಹಳ ಕಾಲದಿಂದ ಸಮುದ್ರವ್ಯಾಪಾರ ಮಾಡುವವನಾಗಿ, ಪೂರ್ವ ದ್ವೀಪಗಳಲ್ಲೇ ಇದ್ದು, ಅಲ್ಲಿಯೇ ಮದುವೆ ಮಾಡಿಕೊಂಡು, ಅಪರಿಮಿತವಾದ ಲಾಭದೊಂದಿಗೆ ಜನ್ಮಭೂಮಿಗೆ ಹಿಂದಿರುಗಿದನು. ಆಮೇಲೆ ಒಂದು ದಿನ ತನ್ನ ಬಾಲ್ಯ ಮಿತ್ರನಾದ ರಾಮುಗುಪ್ತನನ್ನು ನೋಡಲು ಹೋದನು.

ರಾಮುಗುಪ್ತನು ಕೂಡಾ ವರ್ತಕ ವೃತ್ತಿಯವನೇ. ಅವನು ರತ್ನಪುರಿಯ ವರ್ತಕರೊಳಗೆ ಅಗ್ರಸ್ಥಾನ ಪಡೆದಿದ್ದನು. ಮಹಾರಾಜರಸ್ಸೂ ತಲೆ ತಗ್ಗಿಸುವಂತಹ ಐಶ್ವರ್ಯದಲ್ಲಿ ವೈಭವವಾಗಿದ್ದನು. ಮಿತ್ರರಿಬ್ಬರೂ ಒಬ್ಬರ ಅನುಭವವನ್ನು ಒಬ್ಬರೊಂದಿಗೆ ಹೇಳಿಕೊಳ್ಳುತ್ತ ಬಹಳಹೊತ್ತು ಮಾತುಕತೆಯಾಡಿದರು.

ರಾಮುಗುಪ್ತನ ಮನೆಗೆ ಸುದರ್ಶನ ನಿಲಯವೆಂಬ ಹೆಸರನ್ನು ಇಡಲಾಗಿತ್ತು. ಆ ಹೆಸರಿನ ಅಕ್ಷರಗಳು ಮನೆಯ ಮುಂದೆ ಹೊಳೆಯುತ್ತಿದ್ದುವು. ಮಾತಿನ ವರಿಸೆಯಲ್ಲಿ ಧನಗುಪ್ತನು, "ರಾಮುಗುಪ್ತಾ, ಈ ಸುದರ್ಶನನು ಯಾರು ?" ಎಂದು ಕೇಳಿದನು. "ಅವನು ನನ್ನ ಚಿಕ್ಕಮಗ. ಅವನು ಹುಟ್ಟಿದ ಮೇಲೆಯೇ ನನ್ನ ದಶೆ ತಿರಿಗಿದ್ದು. ಮಣ್ಣು ಮುಟ್ಟಿದರೆ ಚಿನ್ನವಾಗುವ ಹಾಗೆ ಆಯಿತು. ಅದಕ್ಕೇ ಈ ಹೆಸರನ್ನು ಮನೆಗೆ ಇರಿಸಿದ್ದೇನೆ" ಎಂದನು ರಾಮುಗುಪ್ತ.

ಈ ಒಂದು ವಿಷಯದಲ್ಲಿ ಮಾತ್ರವಲ್ಲ, ಹಿರಿಯ ಮಗನನ್ನು ಕುರಿತು ಕೇಳಿದರೂ ಯಾವ ಒಳಿತನ್ನೂ ಹೇಳದೆ ಅಸ್ವಾರಸ್ಯವಾಗಿ ಬಾಯಿ ಚಪ್ಪರಿಸಿ, ತನ್ನ ಕಿರಿಯ ಮಗನ ಮೇಲೆಯೇ ಪ್ರತಿಯೊಂದು ಒಳಿತುಗಳನ್ನೂ ಗಂಟುಹಾಕಿ ಮಾತಾಡುವ ರಾಮುಗುಪ್ತನ ಧೋರಣೆಯನ್ನು ನೋಡಿ, ಧನಗುಪ್ತನಿಗೆ ಅಸಹ್ಯವೆನಿಸಿತು. "ನಿನಗೆ ಎಷ್ಟು ಮಂದಿ ಮಕ್ಕಳು ?" ಎಂದು ಕೇಳಿದನು ಧನಗುಪ್ತ.

"ಇಬ್ಬರೇ. ದೊಡ್ಡವನಿಗೆ ಹತ್ತು ವಯಸ್ಸಾಗುತ್ತೆ. ಚಿಕ್ಕವ ಸುದರ್ಶನನಿಗೆ ಆರು ವಯಸ್ಸು. ಬೇರೆ ಮಕ್ಕಳಾಗಿಲ್ಲ" ಎಂದನು ರಾಮುಗುಪ್ತ.

ರಾಮುಗುಪ್ತನ ಹಾಗೆ ಶ್ರಮಿಸಿ ಮುಂದೆ ಬಂದವರಿಗೆ ಸ್ವಶಕ್ತಿಯ ಮೇಲೆಯೂ, ಸ್ವಂತ ಶ್ರಮದ ಮೇಲೆಯೂ ನಂಬುಗೆ ಇರಬೇಕೇ ಹೊರತು, ತನ್ನ ಅದೃಷ್ಟಕ್ಕೆ ಬೇರೇನೋ ಕಾರಣಗಳನ್ನು ನೋಡುವ ರಾಮುಗುಪ್ತನ ಮೂಢತನವನ್ನು ನೋಡಿ ಧನಗುಪ್ತ

ಜಿ. ಶಿವಕುಮಾರ



ನಿಗೆ ಆಶ್ಚರ್ಯವಾಯಿತು. ಇದರಿಂದ ಮುಂದೆ ಮುಂದೆ ತುಂಬಾ ಅನರ್ಥವಾಗ ಬಹುದು, ಆಗಿಯೇ ತೀರುತ್ತದೆ. ತನ್ನ ಚಿಕ್ಕ ಮಗನ ಮೇಲೆ ಅಷ್ಟೊಂದು ನಂಬುಗೆ ಇದ್ದರೆ, ಬೆಳೆಯುತ್ತಾ ಬರುವಾಗ ಆ ಮಗನ ತಲೆ ತಿರುಗಬಹುದು. ಅವನು ಯಾವುದಕ್ಕೂ ಉಪಯೋಗವಿಲ್ಲದವನಾಗುತ್ತಾನೆ. ಅದೇವಿಧವಾಗಿ ರಾಮಗುಪ್ತನ ಹಿರಿಯ ಮಗನಿಗೆ, ತನ್ನಲ್ಲಿ ತನಗೆ ಯಾವ ವಿಶ್ವಾಸವೂ ಇಲ್ಲದೆ ಹೋಗುವ ಅಪಾಯವೂ ಇದೆ. ಹೀಗಾಗಲು ಬಿಡಬಾರದು.

ಧನಗುಪ್ತನು ಒಂದು ನಿಶ್ಚಯಕ್ಕೆ ಬಂದು, "ನೋಡು ರಾಮಗುಪ್ತಾ, ನನಗೆ ಇನ್ನೂ ಮಕ್ಕಳೇ ಆಗಲಿಲ್ಲ. ನನ್ನ ಹೆಂಡತಿ ಪರದೇಶದಿಂದ ಬಂದವಳು. ಅವಳು ಒಬ್ಬಂಟಿಗಳಾಗಿ ಹಲುಬುತ್ತಾಳೆ ಪಾಪ. ಮಕ್ಕಳಾಗುವುದೂ ಬಿಡುವುದೂ ದೈವಚಿತ್ತಾ ಅನ್ನು. ನಿನ್ನ ಹಿರಿಯ ಮಗನನ್ನು ಸ್ವಲ್ಪ ಕಾಲದವರೆಗೆ ನನ್ನೊಂದಿಗೆ ಕಳುಹಿಸಿದಿಯಾದರೆ ಸಂತೋಷವಿತ್ತು. ಕೆಲವು ವರ್ಷ ನಮ್ಮಲ್ಲೇ ಬೆಳೆಯಲಿ" ಎಂದನು. ಧನಗುಪ್ತನು ಈಗ ತನ್ನನ್ನು ಸಹಾ ಮೀರಿಸುವಂತಹ ಧನಿಕನೇ ಆದುದರಿಂದ, ತನ್ನ ದೊಡ್ಡ ಮಗನನ್ನು ಅವನಲ್ಲಿಗೆ ಕಳುಹಿಸುವುದರಲ್ಲಿ ತಪ್ಪೇನಿಲ್ಲವೆಂದು ರಾಮಗುಪ್ತನಿಗೆ ತೋರಿತು. ಹಾಗೆಯೇ ಮಾಡಲು ಒಪ್ಪಿ, ಹಿರಿಯ ಮಗನನ್ನು ಧನಗುಪ್ತನೊಂದಿಗೆ ಕಳುಹಿಸಿದನು.

ಸ್ವಲ್ಪ ಕಾಲ ಕಳೆಯಿತು. ಒಂದು ದಿನ ರಾಮಗುಪ್ತನು ಧನಗುಪ್ತನನ್ನು ನೋಡಲು ಹೋದನು. ಆಗ ಧನಗುಪ್ತನು ತುಂಬಾ ಚಿಂತೆಯಲ್ಲಿ ಬಾಡಿದ ಮುಖದಲ್ಲಿರುವುದನ್ನು ನೋಡಿದನು. ರಾಮಗುಪ್ತನು ಅವನ ಚಿಂತೆಗೆ ಕಾರಣವೇನೆಂದು ಕೇಳಲು, "ಅದನ್ನೇನು ಹೇಳಲಿ? ಚಿಂತೆ ಪಡದಿರಲು ಸಾಧ್ಯವೆ? ನಾನು ಸಮುದ್ರವ್ಯಾಪಾರ ಪ್ರಾರಂಭಿಸಿದ ಮೇಲೆ ನಷ್ಟವೆಂಬುದನ್ನೇ ಅರಿಯದಿದ್ದೆ. ಅಂಥಾ ನನಗೆ ಈಗ ನನ್ನ ಹಡಗುಗಳಲ್ಲಿ ಒಂದು ಲಕ್ಷಗಟ್ಲೆ ಬೆಲೆಯ ಸರಕುಗಳೊಂದಿಗೆ ಸಮುದ್ರದಲ್ಲಿ ಮುಳುಗಿದ ಸುದ್ದಿ ಬಂತು. ಹೀಗೇಕಾಯಿತೋ ತಿಳಿಯದು. ನಿನ್ನ ಮಗ ಮನೆಗೆ ಬಂದಂದಿನಿಂದ ನನಗೆ ಅಡಿಗಡಿಗೂ ಎಂಥದೋ ಕೆಡುಕೇ ಆಗುತ್ತದೆ. ಇರಲಿ, ಸಹಿಸಿಕೊಳ್ಳುತ್ತೇನೆ ಬಿಡು" ಎಂದು ನಿಟ್ಟುಸಿರುಬಿಟ್ಟ ಧನಗುಪ್ತ.

ಈ ಮಾತು ಕೇಳಿ ರಾಮಗುಪ್ತನಿಗೆ ಏನೋ ತಳಮಳವಾಯಿತು. ಮಿತ್ರನಿಗಾದ ನಷ್ಟಕ್ಕೆ ಸಹಾನುಭೂತಿ ತೋರಿಸಿ ಏನೋ ಸಮಾಧಾನ ಹೇಳಿದನು.

ಮತ್ತೆ ಕೆಲವು ದಿನಗಳು ಕಳೆದುವು. ಮತ್ತೊಂದು ದಿನ ಧನಗುಪ್ತನು ತುಂಬಿದ ಚಿಂತೆಯಿಂದ ರಾಮಗುಪ್ತನ ಮನೆಗೆ ಬಂದನು.

ರಾಮಗುಪ್ತನು ತನ್ನ ಮಿತ್ರನ ಖಿನ್ನಮುಖವನ್ನು ನೋಡಿ ಗಾಬರಿಯಾಗಿ, "ಏನು ವಿಶೇಷ? ಮತ್ತೆ ನಷ್ಟವೋ ಕಷ್ಟವೋ ಏನೂ ಬರಲಿಲ್ಲವಷ್ಟೆ?" ಎಂದು ಕೇಳಿದನು.

"ನನಗೇನೂ ತೋರದಾಗಿದೆ ಮಿತ್ರಾ, ಧನ ನಷ್ಟಕ್ಕೂ ಮಿಂಚಿದ ಆಪತ್ತೇ ಬಂದುಬಿದ್ದಿದೆ. ನನ್ನ ಹೆಂಡತಿ ವಿಚಿತ್ರವಾದ ರೋಗದಿಂದ ಹಾಸಿಗೆ ಹಿಡಿದು ನರಳಿಕೊಂಡಿದ್ದಾಳೆ. ಅವಳ ರೋಗ ಎಂತಹದೆಂದು ಯಾವ ವೈದ್ಯರಿಗೂ ಗೊತ್ತಾಗುವುದಿಲ್ಲಂತೆ. ಇದೆಲ್ಲಾ, ನೋಡು ರಾಮಗುಪ್ತಾ! ನನಗೊಂದು ಬಲವಾದ ಸಂದೇಹ, ಅಲ್ಲಾ ನಂಬುಗೇ ಅನ್ನು. ನಿನ್ನ ದೊಡ್ಡ ಮಗನಿಂದ ನಿನಗೇನಾದರೂ ಅನಿಷ್ಟ ಉಂಟಾದ ಹಾಗೆ ಅನಿಸಿದೆಯಾ? ಏಕೆಂದರೆ, ಅವನು ನನ್ನ ಮನೆಗೆ ಬಂದ ಮೇಲೆ ನನಗೆ ಒಂದೇ ಒಂದು ಒಳಿತಾದುದೂ ನೆನಪಾಗುವುದಿಲ್ಲ!" ಎಂದನು ಧನಗುಪ್ತ.

ಅವನು ಹೇಳಿದ ಮಾತುಗಳನ್ನು ಕೇಳಿ ರಾಮ ಗುಪ್ತನಿಗೆ ಈಸಾರಿ ವಿಪರೀತ ಸಿಟ್ಟುಬಂತು.

"ನನ್ನ ಮಗನಿಂದಾಗಿ ನನಗೆ ಒಂದು ದಿನ ಕೂಡಾ ಯಾವ ಕೆಡುಕೂ ಆಗಲಿಲ್ಲ. ನಾನೇನೂ ಅವನನ್ನು ಬೆಳೆಸಿಕೋ ಅಂತ ನಿನಗೆ ಕೊಟ್ಟದ್ದೂ ಅಲ್ಲ. ನೀನಾಗಿ ಕೇಳಿ ನಿನ್ನ ಮನೆಗೆ ಕರೆದುಕೊಂಡು ಹೋಗಿದ್ದೀ. ನಿನಗೇನಾದರೂ ನಷ್ಟವೋ ಕಷ್ಟವೋ ಬಂದರೆ ಅವು ಗಳಿಗೆ ಸರಿಯಾದ ಕಾರಣ ತಿಳಿದುಕೊಳ್ಳದೆ ಎಲ್ಲದಕ್ಕೂ ನನ್ನ ಮಗನೇ ಕಾರಣವೆಂದುಕೊಳ್ಳುವುದು ನಿನ್ನ ಮೂಢ ವಿಶ್ವಾಸವಲ್ಲವೆ ಮತ್ತೇಂಥದು? ಅವನನ್ನು ಈಗಲೇ ನನ್ನ ಮನೆಗೆ ಕಳಿಸಿ ಬಿಡು, ನಿನ್ನಿಂದಾಗಿ ಅವನಿಗೆ ಕೆಟ್ಟ ಹೆಸರು ಬರುವುದನ್ನು ನಾನು ಸಹಿಸ ಲಾರೆ" ಎಂದನು ಕೋಪದಿಂದ.

ಈ ಮಾತು ಕೇಳಿ ಧನಗುಪ್ತನ ಮುಖವು ಒಮ್ಮೆಗೇ ವಿಕಸನವಾಯಿತು. "ಹೌದು, ನೀನು ಹೇಳುವುದೇ ಸರಿ ರಾಮಗುಪ್ತಾ. ನೀನು ಬಂದು ನಿನ್ನ ಮಗನನ್ನು ಕರೆದುಕೊಂಡು ಹೋಗುವುದೇ ಒಳ್ಳೆಯದೆಂದು ನನಗೂ ಕಾಣುತ್ತದೆ. ಈಗಲೇ ನನ್ನ ಜತೆಯಲ್ಲಿ ಬಾದು ಬಿಡು. ಒಟ್ಟಿಗೇ ಹೋಗೋಣ, ಯಾರಿಗೂ ನಮ್ಮ ಸ್ನೇಹದಲ್ಲಿ ವ್ಯತ್ಯಾಸ ತೋರ ಬಾರದಷ್ಟೆ?" ಎಂದನು ಧನಗುಪ್ತ. ಹಾಗೆಯೇ ರಾಮಗುಪ್ತನು ಧನಗುಪ್ತನೊಂದಿಗೆ ಹೊರಟನು.



ಧನಗುಪ್ತನ ಮನೆಯನ್ನು ನೋಡಿದಾಗ ಅಲ್ಲಿ ವಿಷಾದದ ಸೂಚನೆ ಯಾವುದೂ ಕಂಡು ಬರಲಿಲ್ಲ, ಮದುವೆ ಮನೆಯ ಹಾಗೆ ತುಂಬ ಕಲಕಲ ವಾಗಿತ್ತು. ಧನಗುಪ್ತನ ಹೆಂಡತಿ ಮೈತುಂಬ ಆಭರಣ ಗಳಿಂದ, ಬೆಲೆಬಾಳುವ ಪಟ್ಟೇ ಸೀರೆಯಿಂದ ಲಕ್ಷ್ಮೀ ದೇವಿಯ ಹಾಗೆ ಅತ್ತಿತ್ತ ತಿರುಗುತ್ತಿದ್ದವಳು, ರಾಮುಗುಪ್ತನನ್ನು ನೋಡಿ ನಗುತ್ತ ಬಂದು ಸ್ವಾಗತ ಹೇಳಿದಳು. ಅವಳನ್ನು ನೋಡಿ ರೋಗಿಷ್ಠಳೆಂದರೆ ಅರ್ಥವೇ ಇಲ್ಲ.

ಅದಕ್ಕಿಂತ ಹೆಚ್ಚಾಗಿ ರಾಮುಗುಪ್ತನಿಗೆ ಆಶ್ಚರ್ಯ ವನ್ನುಂಟು ಮಾಡಿದ್ದೆಂದರೆ, ತನ್ನ ದೊಡ್ಡ ಮಗನು ಅತ್ಯಂತ ಉಲ್ಲಾಸದಿಂದ, ಇಡೀ ಮನೆಯೇ ತನ್ನದೆಂಬ ಹಾಗೆ ಓಡಾಡಿ ಕೊಂಡಿದ್ದಾನೆ. ತಂದೆ ಬಂದುದನ್ನು ನೋಡಿದ ಕೂಡಲೇ ಅವನ ಮುಖವು ಗಂಟುಕಟ್ಟಿ ಕೊಂಡಿತು.

ರಾಮುಗುಪ್ತನು ಸ್ತಬ್ಧನಾಗಿ ನಿಂತು, ಬಾಯಿಯಿಂದೇನೂ ಹೇಳದೆ ಧನಗುಪ್ತನನ್ನು ನೋಡಿದನು. ಮುಗುಳು ನಗುತ್ತಿರುವ ಧನಗುಪ್ತನೊಂದಿಗೆ ಏನು ಹೇಳಬೇಕೆಂದು ಅವನಿಗೆ ಗೊತ್ತಾಗಲಿಲ್ಲ.

"ಅರ್ಥವಾಗಲಿಲ್ಲವೇ ರಾಮುಗುಪ್ತ? ನನಗೆ ಯಾವ ಬಗೆಯ ಕಷ್ಟವೋ ನಷ್ಟವೋ ಬರಲಿಲ್ಲ. ಒಂದು ವೇಳೆ ಕಷ್ಟನಷ್ಟಗಳು ಬಂದಿದ್ದರೂ ಅದು ನಿನ್ನ ಮಗನಿಂದ ಬಂದಿತೆಂದುಕೊಳ್ಳುವಷ್ಟು ಮೂಢನೂ ನಾನಲ್ಲ. ನೀನು ನಿನ್ನ ಚಿಕ್ಕಮಗನನ್ನು ಅದೃಷ್ಟದೇವತೆ ಎಂದು ಎಲ್ಲರೊಡನೆ ಹೇಳುತ್ತಿದ್ದರೆ, ನಿನ್ನ ದೊಡ್ಡ ಮಗನ ಮನಸ್ಸು ಮುದುಡಿ ಹೋಗುವುದೂ, ಚಿಕ್ಕಮಗನ ಮುಖ ಉಬ್ಬಿ ಹೋಗುವುದೂ ಒಳ್ಳೆಯದಲ್ಲವೆಂದು ಹೀಗೆ ಮಾಡಿದೆ. ನಿನಗೆ ಜ್ಞಾನೋದಯವಾಗಲೆಂತಲೇ ಎರಡು ಸುಳ್ಳು ಹೇಳಿದೆ. ವ್ಯತ್ಯಾಸವಾಗಿ ತಿಳಿದುಬಿಡಬೇಡ. ನಾಳೆ ನಿನಗೆ ಯಾವ ಕಾರಣದಿಂದಾದರೂ ಒಳ್ಳೆಯದು ಕೂಡಿ ಬಾರದೆ ಹೋದರೆ, ನಿನ್ನ ಚಿಕ್ಕಮಗನು ತನ್ನ ದೇನೋ ತಪ್ಪಿರಬೇಕೆಂದು ತುಂಬಾ ನೊಂದುಕೊಳ್ಳುತ್ತಾನೆ. ಸ್ವತಃ ನೀನೇ ನನ್ನಲ್ಲಿ ಮೂಢವಿಶ್ವಾಸವಿದೆಯೆಂದು ಯಾವಾಗ ಹೇಳಿದಿಯೋ ಆಗಲೇ ನನ್ನ ಪ್ರಯತ್ನ ಫಲಕೊಟ್ಟಂತಾಯಿತು. ನಿನ್ನ ಮಗನನ್ನು ನೀನು ಸಂತೋಷವಾಗಿ ಕರೆದುಕೊಂಡು ಹೋಗು" ಎಂದನು ಧನಗುಪ್ತ.

ರಾಮುಗುಪ್ತನು ಲಜ್ಜೆಯಿಂದ ತಲೆವಾಗಿ, "ನನಗೆಲ್ಲಾ ಅರ್ಥವಾಯಿತು. ನಾನು ಸರಿಯಾಗಿ ಬದಲಾವಣೆ ಹೊಂದಲು ಇನ್ನೂ ಸ್ವಲ್ಪಕಾಲ ಹಿಡಿದೀತು. ಅದುವರೆಗೆ ಅವನು ನಿನ್ನ ಮನೆಯಲ್ಲೇ ಇರಲಿ. ಅವನು ಇಲ್ಲಿ ಬಹಳ ಸಂತೋಷದಲ್ಲಿ ಸುಖವಾಗಿರುವುದನ್ನು ನೋಡಿದೆ!" ಎಂದನು.






ಮಹಿಷಾಸುರನನ್ನು ಕೊಂದು ಮಹಾದೇವಿ ಅಂತರ್ಧಾನಳಾಗಿ ಹೋದ ಮೇಲೆ, ದೇವತೆಗಳ ಭಯನಿವಾರಣೆಯಾಗಿ ನೆಮ್ಮದಿಯಾಯಿತು. ಮಹಿಷಾಸುರನ ಮರಣದಿಂದ ಅರಾಜಕವಾದ ಅವನ ರಾಜ್ಯಕ್ಕೆ ದೇವತೆಗಳೆಲ್ಲಾ ಆಲೋಚಿಸಿ, ಸೂರ್ಯವಂಶದ ರಾಜನೊಬ್ಬನನ್ನು ಪಟ್ಟಾಭಿಷೇಕಮಾಡಿದರು.

ಪ್ರಪಂಚವು ಸುಖವಾಗಿರುವ ಕಾಲದಲ್ಲಿ ಇನ್ನೊಂದು ಪೀಡೆ ತಲೆ ಎತ್ತಿತು. ಅದೇನೆಂದರೆ ರಸಾತಲದಲ್ಲಿ ಶುಂಭ, ನಿಶುಂಭರೆಂಬ ದಾನವರಿಬ್ಬರು, ಆಹಾರವನ್ನೂ ನೀರನ್ನೂ ಬಿಟ್ಟು ಘೋರ ತಪಸ್ಸನ್ನು ಮಾಡಿದರು. ಅವರ ತಪಸ್ಸಿಗೆ ಮೆಚ್ಚಿ ಬ್ರಹ್ಮನು ಪ್ರತ್ಯಕ್ಷನಾಗಿ ಏನು ವರ ಬೇಕೆಂದು ಕೇಳಿದನು.

ಶುಂಭ, ನಿಶುಂಭರು ಬ್ರಹ್ಮನನ್ನು ನೋಡಿ, "ದೇವ ದೇವಾ, ನಿನ್ನಿಂದಾಗಲೀ, ಇತರರಿಂದಾಗಲೀ, ಬೇರೆಯಾವುದರಿಂದಾಗಲೀ ನಮಗೆ ಮರಣ ಬಾರದ ಹಾಗೆ ವರವನ್ನು ಕೊಡು" ಎಂದು ಕೇಳಿದರು. "ಅದು ಸಾಧ್ಯವಿಲ್ಲ" ಎಂದನು ಬ್ರಹ್ಮ.

"ಹಾಗಾದರೆ ಹೆಣ್ಣಿನಿಂದ ಹೊರತು ಮತ್ತಾರಿಂದಲೂ ನಮಗೆ ಸಾವು ಬಾರದಂತೆ ವರವನ್ನು ಅನುಗ್ರಹಿಸು. ಅಬಲೆಯೊಬ್ಬಳು ನಮ್ಮನ್ನು ಕೊಲ್ಲಲು ಬರಲಿ, ಆಗ ನೋಡಿಕೊಳ್ಳುತ್ತೇವೆ" ಎಂದರು ಶುಂಭ, ನಿಶುಂಭರು. ಹಾಗೆಯೇ ಆಗಲೆಂದು ವರವನ್ನು ಕೊಟ್ಟನು ಬ್ರಹ್ಮ.

ಹೀಗೆ ಆ ಅಣ್ಣತಮ್ಮಂದಿರು ಬ್ರಹ್ಮನಿಂದ ವರವನ್ನು ಪಡೆದು ಭೃಗು ಮಹಾಮುನಿಯನ್ನು ತಮ್ಮ ಪುರೋಹಿತನನ್ನಾಗಿಟ್ಟುಕೊಂಡರು. ಆ ಮೇಲೆ ಒಳ್ಳೆಯ ಮುಹೂರ್ತವನ್ನು ನೋಡಿ ಶುಂಭನು ರಾಜ್ಯಾಭಿಷೇಕಮಾಡಿಕೊಂಡು, ತಮ್ಮನಾದ ನಿಶುಂಭನನ್ನು ಮಂತ್ರಿಯನ್ನಾಗಿಟ್ಟುಕೊಂಡು ರಾಜ್ಯಪಾಲನೆ ಮಾಡ ತೊಡಗಿದನು. ಚಂಡ, ಮುಂಡರೆಂಬ ಮಹಾವೀರರು ಅವನಿಗೆ ಸೇನಾಧಿಪತಿಗಳಾಗಿದ್ದರು. ಹೀಗೆ ಶುಂಭ, ನಿಶುಂಭರ ವಿಜೃಂಭಣೆಯನ್ನು ನೋಡಿ, ಪಾತಾಳದಲ್ಲಿದ್ದ ಧೂಮ್ರಲೋಚನ ಮತ್ತು ರಕ್ತಬೀಜ ಎಂಬ ರಾಕ್ಷಸರು ಎರಡು ಅಕ್ಷೌಹಿಣಿ ಸೇನೆಯೊಂದಿಗೆ

೧೫. ಶುಂಭ, ನಿಶುಂಭರು



ಬಂದು ಶುಂಭ, ನಿಶುಂಭರ ಆಸ್ಥಾನದಲ್ಲಿ ಸೇರಿದರು. ಇವರೆಲ್ಲ ಮಹಾಬಲಿಷ್ಠರು.

ರಕ್ತಬೀಜನೆಂಬವನು ಯುದ್ಧರಂಗದಲ್ಲಿ ಆಜೇಯನಾಗುವಂಥ ಘೋರ ಮಹಿಮೆಯುಳ್ಳವನು. ಯುದ್ಧದಲ್ಲಿ ಅವನಿಗೆ ಗಾಯವಾಗಿ ರಕ್ತ ಭೂಮಿಗೆ ಬಿದ್ದರೆ ಬೊಟ್ಟಿಗೊಂದರಂತೆ ಅವನಂತಹ ಮಹಾವೀರರು ಸಾವಿರ ಲೆಕ್ಕದಲ್ಲಿ ಹುಟ್ಟಿಕೊಳ್ಳುತ್ತಾರೆ. ಆದುದರಿಂದಲೇ ಅವನಿಗೆ ರಕ್ತಬೀಜನೆಂಬ ಹೆಸರು. ಇಂತಹ ಘನೋ ಒಂದು ಅದ್ಭುತ ಶಕ್ತಿಯುಳ್ಳ ಅನೇಕ ದಾನವ ವೀರರು ಶುಂಭನ ಆಸ್ಥಾನಕ್ಕೆ ಬಂದು ಸೇರಿದುದರಿಂದ ಅವನ ಸೇನಾ ಬಲವು ಬಹು ದೊಡ್ಡದಾಯಿತು.

ಹೀಗಿರುವಾಗ ಒಂದುಸಾರಿ ನಿಶುಂಭನಿಗೆ ಇಂದ್ರನನ್ನು ಜಯಿಸಬೇಕೆಂದು ಬುದ್ಧಿ ಹುಟ್ಟಿತು. ಹುಟ್ಟಿದ್ದೇ ತಡ, ಅವನು ದಂಡಿನೊಂದಿಗೆ ಹೊರಟು ಅಮರಾವತಿಗೆ ದಾಳಿಯಿಟ್ಟನು. ಇಂದ್ರನು ದೇವತೆಗಳೊಂದಿಗೆ ಬಂದು ಯುದ್ಧವನ್ನು ಪ್ರಾರಂಭಿಸಿದನು. ಕಡೆಗೆ ಇಂದ್ರನ ವಜ್ರಾಯುಧದ ಪೆಟ್ಟಿನಿಂದ ನಿಶುಂಭನು ಮೂರ್ಛೆ ಹೋಗಿಬಿದ್ದನು.

ಇದನ್ನು ಕೇಳಿ ಶುಂಭನಿಗೆ ಬಂದ ಕೋಪವು ಅಷ್ಟಿಷ್ಟಲ್ಲ. ಅವನು ಮಹಾ ರಭಸದಿಂದ ಯುದ್ಧರಂಗಕ್ಕೆ ಬಂದು, ದೇವತೆಗಳನ್ನೆಲ್ಲಾ ಚೆಲ್ಲಾಚೆದರಾಗುವಂತೆ ದಿಕ್ಕು ದಿಕ್ಕುಗಳಿಗೆ, ಓಡಿಸಿ, ಇಂದ್ರನನ್ನೂ ಎಳೆದು ಉರುಳಿಸಿ ಓಡಿಸಿ, ತಾನೇ ಇಂದ್ರಾಧಿಪತ್ಯವನ್ನು ವಹಿಸಿಕೊಂಡನು. ಆಮೇಲೆ ಅಷ್ಟದಿಕ್ಪಾಲಕರನ್ನು ತಾನು ಹೇಳಿದ ಹಾಗೆ ಕೇಳುವಂತೆ ಮಾಡಿ, ಮೂರು ಲೋಕಗಳನ್ನೂ ಆಳುತ್ತ, ನಂದನವನದಲ್ಲಿ ಅಪ್ಸರಸಿಯರೊಂದಿಗೆ ವಿಹರಿಸುತ್ತ ಆನಂದವಾಗಿರ ತೊಡಗಿದನು.

ಅವನು ದಿಕ್ಪಾಲಕರನ್ನು ನೋಡಿಕೊಳ್ಳಲು ತನ್ನ ಕಡೆಯ ದಾನವರನ್ನು ನಿಯೋಜಿಸಿದನು. ಅದನ್ನು ಸಹಿಸಲಾರದೆ ದಿಕ್ಪಾಲಕರು ದಿಕ್ಕಿಲ್ಲದವರಾಗಿ ಓಡಿಹೋದರು. ಇಂತಹ ಶುಂಭೇಂದ್ರನ ಪರಿಪಾಲನೆಯಲ್ಲಿ ದೇವತೆಗಳನ್ನು ಕೇಳುವವರಿಲ್ಲದೆ ಕಾಡುಪಾಲಾಗಿ ಗುಹೆಗಳಲ್ಲಿ ಕಷ್ಟಪಡತೊಡಗಿದರು.

ಈ ಅವಸ್ಥೆಯಲ್ಲಿ ಸಾವಿರ ವರ್ಷಗಳು ಕಳೆದುವು. ಕಷ್ಟಗಳಲ್ಲಿ ಸಿಕ್ಕಿದ ಇಂದ್ರನೇ ಮೊದಲಾದವರು, ಸ್ವರ್ಗವನ್ನು ಮತ್ತೆ ಹೇಗೆ ಸಂಪಾದಿಸಬೇಕೋ, ಶುಂಭನನ್ನು ಹೇಗೆ ಕೊಲ್ಲಬೇಕೋ ತಿಳಿಯದೆ, ಒಂದು ದಿನ ತಮ್ಮ ಗುರುವಾದ ಬೃಹಸ್ಪತಿಯೊಂದಿಗೆ. "ಮಹಾತ್ಮಾ, ನಿನಗೆ ತಿಳಿಯದಿರುವ ಸಂಗತಿ ಯಾವುದೂ ಇಲ್ಲವಷ್ಟೆ? ದೇವತೆಗಳಿಗೆ ಬಂದ ಈ ದುಸ್ಥಿತಿ ಹೇಗೆ ನಿವಾರಣೆಯಾಗುವುದೋ ಹೇಳಲಾರೆಯಾ? ಮಂತ್ರಗಳಿಗೆ ಬಲು ಹೆಚ್ಚಿನ ಪ್ರಭಾವವಿದೆಯಷ್ಟೆ? ಅವುಗಳಿಂದ ಏನಾದರೂ ಅಭಿಚಾರವೋ, ಮತ್ತೇನೋ ಮಾಡಿ, ನಮ್ಮ ರಾಜ್ಯವನ್ನು ನಮಗೆ ಕೊಡಿಸು" ಎಂದು ಕೇಳಿಕೊಂಡರು.

"ಇಂದ್ರಾ, ನೀನು ಹೇಳಿದಂತೆ ಮಂತ್ರ ತಂತ್ರಗಳು ಅಪಾರಶಕ್ತಿಯುಳ್ಳವಾದರೂ, ವಿಧಿ ನಿಯಮವನ್ನು

ಅನುಸರಿಯೇ ಕೆಲಸಮಾಡುವಂಥವು. ವಿಧಿ ನಿಯಮಕ್ಕೆ ವ್ಯತಿರೇಕವಾಗಿ ಯಾವ ಶಕ್ತಿಯೂ ಕೆಲಸಮಾಡ ಲಾರದು. ಆ ಮಂತ್ರ ತಂತ್ರಗಳಿಗೆ ಅಧಿಪತಿಗಳಾದ ನೀವೇ ಈಗ ದುರ್ದಶೆಯ ಪಾಲಾಗಿದ್ದೀರಿ. ಈ ಸ್ಥಿತಿ ಯಲ್ಲಿ ಮಂತ್ರಗಳು ನಿಮಗೆ ಹೇಗೆ ಸಹಾಯಮಾಡ ಬಲ್ಲವು? ಆದರೂ ಒಂದು ಮಾಡಬಹುದು. ಜಗಜ್ಜನನಿಯಾದ ಮಹಾದೇವಿ ಯಾರಿಗೂ ಸಾಧ್ಯ ವಾಗದಂತಹ ಮಹಿಷಾಸುರನನ್ನು ಕೊಂದ ಸಂಗತಿ ನಿಮಗೆ ಗೊತ್ತೇಯಿದೆ. ಆ ಮಹಾದೇವಿಯನ್ನೇ ಆಶ್ರಯಿಸಿರಿ. ನೀವು ಹಿಮಾಲಯಕ್ಕೆ ಹೋಗಿ ಆ ದೇವಿಯ ಮಾಯಾಬೀಜ ಮಂತ್ರವನ್ನು ಪುನಶ್ಚರಣೆ ಮಾಡಿರಿ." ಎಂದನು ದೇವಗುರು ಬೃಹಸ್ಪತಿ.

ದೇವತೆಗಳು ಆ ಪ್ರಕಾರವೇ ಹಿಮಾಲಯಕ್ಕೆ ಹೋಗಿ, ಒಂದು ಪ್ರಶಸ್ತವಾದ ಸ್ಥಳದಲ್ಲಿ ಮಾಯಾ ಬೀಜ ಮಂತ್ರವನ್ನು ಜಪಿಸುತ್ತ ದೇವಿಯನ್ನು ಧ್ಯಾನಿಸ ತೊಡಗಿದರು.

ಕೆಲವು ದಿನಗಳಲ್ಲಿ ಮಹಾದೇವಿ, ಒಳ್ಳೆಯ ಸೀರೆ ಯಿಂದ, ಸುಂದರವಾದ ದಿವ್ಯಾಭರಣಗಳನ್ನು ಧರಿಸಿ ಕೊಂಡು, ಆಗ ತಾನೇ ಗಂಗಾನದಿಯಲ್ಲಿ ಸ್ನಾನಮಾಡಿ ಎಲ್ಲಿಗೋ ಹೋಗುವವಳಂತೆ, ಒಂದು ಗುಹೆಯೊಳಗಿ ನಿಂದ ನಡೆದು ಬರುತ್ತ, ಧ್ಯಾನ ಮುದ್ರೆಯಲ್ಲಿರುವ ದೇವತೆಗಳನ್ನು ನೋಡಿ, "ಯಾರು ನೀವು? ದೇವತೆಗಳ ಹಾಗೆ ಕಾಣುವಿರಲ್ಲ? ಏನು ಕೆಲಸದ ಮೇಲೆ ಇಲ್ಲಿಗೆ ಬಂದು ಕುಳಿತಿದ್ದೀರಿ? ಚಿಂತೆಯಲ್ಲಿ ಬಾಡಿದಂತಿರುವಿ ರಲ್ಲಾ?" ಎಂದು ವಿಚಾರಿಸಿದಳು.

ದೇವತೆಗಳು ಅವಳಿಗೆ ಕೈಮುಗಿದು, "ಅಮ್ಮಾ! ನಮಗೆ ಬಂದ ಆಪತ್ತನ್ನು ನೀನಾದರೂ ತೊಲಗಿಸು. ನಾವು ಯುದ್ಧದಲ್ಲಿ ದಾನವರ ಪೆಟ್ಟಿಗೆ ತಡೆದುಕೊಳ್ಳ ಲಾಗದೆ ನಮ್ಮ ಅಸಮರ್ಥತೆಯನ್ನು ತಿಳಿಸಲಿಕ್ಕೇ ಬಂದಿದ್ದೇವೆ. ಇಲ್ಲಿ ನಮ್ಮ ಮುಂದೆ ಬಂದ ನೀನು ನಮ್ಮ ಧ್ಯಾನದೇವಿಯಲ್ಲದೆ ಬೇರೆ ಯಾರೂ ಅಲ್ಲ.



ನಮಗೀಗ ನೀನೇ ದಿಕ್ಕಾಗಿರುವಿಯಮ್ಮಾ. ಶುಂಭ, ನಿಶುಂಭರೆಂಬ ದಾನವರು ನಮ್ಮನ್ನು ಸೋಲಿಸಿ ಸ್ವರ್ಗ ವನ್ನು ಆಕ್ರಮಿಸಿ ಆಧಿಪತ್ಯ ನಡೆಸುತ್ತಿದ್ದಾರೆ. ಇವರಿಗೆ ಹೆಣ್ಣಿನ ಕೈಯಲ್ಲಿ ಹೊರತು ಬೇರೆಯಾರಿಂದಲೂ ಸಾವಿಲ್ಲ. ಹಿಂದೆ ಮಹಿಷಾಸುರನನ್ನು ಕೊಂದಾಗ, ಮುಂದೆ ಕೂಡಾ ನಮಗೆ ಕಷ್ಟಗಳು ಬಂದಾಗ, ಅವನ್ನು ಹೋಗಲಾಡಿಸಿ ಕಾಪಾಡುವೆನೆಂದು ನೀನು ಮಾತು ಕೊಟ್ಟಿರುವೆ. ಬೇರೆ ಯಾವ ಹೆಣ್ಣು ತಾನೇ ಅವರನ್ನು ಕೊಲ್ಲಲು ಸಾಧ್ಯವಿದೆ? ಆದುದರಿಂದ ನಾವು ದಿಕ್ಕಿಲ್ಲದವರಾಗಿ ಹೀಗೆ ಕಾಡು ಕಾಡು ತಿರುಗು ತ್ತಿದ್ದೇವೆ. ಆ ಶುಂಭ, ನಿಶುಂಭರು ಮಾತ್ರವಲ್ಲದೆ ರಕ್ತಬೀಜ, ಚಂಡ, ಮುಂಡರೆಂಬವರೂ ಅವರೊಂದಿಗೆ ಕೂಡಿ ನಮಗೆ ಶತ್ರುಗಳಾಗಿದ್ದಾರೆ. ಈಗ ಅಷ್ಟ ದಿಕ್ಕುಗಳ ಅಧಿಪತಿಗಳು ಕೂಡಾ ರಾಕ್ಷಸರೇ. ಆದು ದರಿಂದ ಆ ರಾಕ್ಷಸರನ್ನೆಲ್ಲಾ ನೀನೇ ಸಂಹಾರಮಾಡ ಬೇಕು" ಎಂದು ಪ್ರಾರ್ಥಿಸಿಕೊಂಡರು.



ಮಹಾದೇವಿ ದೇವತೆಗಳ ದೈನ್ಯಾವಸ್ಥೆಯನ್ನು ನೋಡಿ ಮನಗರಗಿ, ತನ್ನಿಂದ ಕೌಶಿಕಿ ಎಂಬ ಶಕ್ತಿಯನ್ನು ಹುಟ್ಟಿಸಿದಳು. ಆ ಶಕ್ತಿದೇವಿ ಕಪ್ಪಗಾಗಿದ್ದುದರಿಂದ ಕಾಳಿಕಾ ಎಂತಲೂ, ಕಾಳರಾತ್ರಿ ಎಂತಲೂ ಕರೆಯಿಸಿಕೊಂಡು ಘೋರವಾದ ರೂಪವನ್ನು ಧರಿಸಿದಳು.

ಮಹಾದೇವಿ ಕಾಳಿಕೆಯನ್ನು ತನ್ನ ಪಾರ್ಶ್ವದಲ್ಲಿರಿಸಿಕೊಂಡು, "ದೇವತೆಗಳೇ, ಇನ್ನು ಚಿಂತಿಸಬೇಡಿರಿ. ಆ ಶುಂಭ, ನಿಶುಂಭರನ್ನೂ, ಅವರೊಂದಿಗಿರುವ ರಕ್ತಬೀಜ ಮೊದಲಾದ ರಾಕ್ಷಸರನ್ನೂ ಕೊಂದು ನಿಮ್ಮ ಕಷ್ಟ ತೊಲಗಿಸುತ್ತೇನೆ" ಎಂದು ಅಭಯವಿತ್ತು, ಆಗಲೇ ಪ್ರತ್ಯಕ್ಷವಾದ ತನ್ನ ಸಿಂಹದ ಮೇಲೆ ಕೌಶಿಕಿಯೊಂದಿಗೆ ಏರಿಕೊಂಡಳು. ಅಲ್ಲಿಂದ ಹೊರಟ ಮಹಾದೇವಿ ಶತ್ರುಗಳಿರುವ ನಗರಕ್ಕೆ ಹೋಗಿ, ನಗರದ ಹೊರಗಿನ ಉದ್ಯಾನದಲ್ಲಿ ವಿಹರಿಸ ತೊಡಗಿದಳು. ವಿಹರಿಸುತ್ತ ಅತಿ ಮನೋಹರ ರಾಗದಿಂದ ಗಾನ ಮಾಡ ತೊಡಗಿದಳು. ಅವಳ ಗಾಯನದಿಂದ ದೇವತೆಗಳು ಪರಮಾನಂದಗೊಂಡು ತಲೆದೂಗುತ್ತಿರಲು, ಮೃಗಗಳೂ ಪಕ್ಷಿಗಳೂ ತಮ್ಮನ್ನು ಮರೆತು ಕಿವಿನಿಗುರಿಸಿ ಕೇಳ ತೊಡಗಿದುವು.

ಆ ಸಮಯದಲ್ಲಿ ಚಂಡಮುಂಡರು ವಿಲಾಸವಾಗಿ ಆ ಉದ್ಯಾನದಲ್ಲಿ ತಿರುಗಾಡಲು ಬಂದು, ಮನೋಹರವಾಗಿ ಕೇಳಿಸುವ ಆ ಗಾಯನದಿಂದ ಸ್ತಬ್ಧರಾಗಿ ಸ್ವಲ್ಪ ಹೊತ್ತು ನಿಂತು, ಸಮೀಪ ಹೋಗಿ ಜಗನ್ಮೋಹಿನಿಯಾದ ಅಂಬಳ ಅವತಾರವನ್ನೂ, ಅವಳೊಂದಿಗಿರುವ ಕೌಶಿಕಿಯನ್ನೂ ನೋಡಿ, ಅತ್ಯಾಶ್ಚರ್ಯದಿಂದ ನಗರಕ್ಕೆ ಹಿಂದಿರುಗಿ ಹೋಗಿ, ಶುಂಭೇಂದ್ರನಿಗೆ ನಮಸ್ಕಾರಮಾಡಿ ಹೀಗೆಂದರು:

"ಎಲ್ಲಿಂದಲೋ ಅಪೂರ್ವ ಸುಂದರಿಯಾದ ಸ್ತ್ರೀಯೊಬ್ಬಳು ಸಿಂಹದ ಮೇಲೇರಿಕೊಂಡು ನಮ್ಮ ಉದ್ಯಾನವನಕ್ಕೆ ಬಂದಿದ್ದಾಳೆ. ಅವಳ ಸೌಂದರ್ಯವನ್ನು ವರ್ಣಿಸಲಿಕ್ಕೇ ಸಾಧ್ಯವಿಲ್ಲ. ಇನ್ನು ಅವಳ ಕಂಠಸ್ವರದಿಂದ ಹೊರಡುವ ಗಾಯನದ ರುಚಿಗಂತೂ ಎಣೆಯೇ ಇಲ್ಲ. ನಮ್ಮ ಉದ್ಯಾನದಲ್ಲಿ ಅವಳು ಹಾಡುತ್ತಿರುವಾಗ, ಪಶುಪಕ್ಷ್ಯಾದಿಗಳೆಲ್ಲಾ ಮೈಮರೆತು ಕೇಳುತ್ತಾ ಸ್ತಬ್ಧವಾಗಿವೆ. ಅವಳೊಂದಿಗೆ ಇನ್ನೊಬ್ಬಳು ಕೂಡಾ ಇದ್ದಾಳೆ. ಅವಳಂತೂ ಅತ್ಯದ್ಭುತ ಕೃಷ್ಣಸುಂದರಿ. ಹೆಚ್ಚು ಹೇಳಲೇಕೆ? ನೀನೇ ಸ್ವತಃ ಹೋಗಿ ನೋಡಿ, ಅವಳ ಸಮಾಚಾರ ತಿಳಿದುಕೊಂಡು, ನಿನ್ನ ಚಿತ್ತದಂತೆ ಮಾಡಿಕೊಳ್ಳಬಹುದು. ನನ್ನನ್ನು ಕೇಳುವುದಾದರೆ ನೀನು ಅವಳನ್ನು ಪತ್ನಿಯಾಗಿ ಮಾಡಿಕೊಂಡರೆ ಅದಕ್ಕಿಂತ ಹೆಚ್ಚಿನ ಸುಖ ನಿನಗಿರದು. ಐರಾವತವನ್ನೂ, ಪಾರಿಜಾತವನ್ನೂ, ಉಚ್ಚೈಶ್ರವವನ್ನೂ, ವಿಮಾನವನೂ ಜಯಿಸಿಕೊಂಡು ಇಂದ್ರಪದವಿಯಲ್ಲಿರುವ ನಿನಗೆ ಅವಳೇ ತಕ್ಕ ಪತ್ನಿ ಪ್ರಭುವೆ."

ಚಂಡ, ಮುಂಡರ ಈ ಮಾತುಗಳಿಂದ ಶುಂಭನಿಗೆ ಮೋಹದ ಮತ್ತು ಚೆನ್ನಾಗಿ ತಲೆಗೇರಿತು. ಅವನು



ತನ್ನ ಸಮೀಪದಲ್ಲಿದ್ದ ಸುಗ್ರೀವನೆಂಬವನನ್ನು ಕರೆದು, “ನೀನು ಕೂಡಲೇ ನನ್ನಪರವಾಗಿ ಉದ್ಯಾನಕ್ಕೆ ಹೋಗಿ, ಆ ಸುಂದರಾಂಗಿಯನ್ನು ಕರೆದುಕೊಂಡು ಬಂದುಬಿಡು. ಬಲವಂತವೇನೂ ಮಾಡದಿರು. ಶುಭ ಶೃಂಗಾರಗಳಿಗೆ ಸಂಬಂಧಿಸಿದ ಕೆಲಸದಲ್ಲಿ ದಂಡೋಪಾಯವನ್ನು ಪ್ರಯೋಗಿಸಲೇ ಬಾರದು. ನೆನಪಿರಲಿ!” ಎಂದನು.

ಅದರಂತೆ ಸುಗ್ರೀವನು ಉದ್ಯಾನವನಕ್ಕೆ ಹೋಗಿ, ಸಿಂಹದ ಮೇಲೆ ವಿಹರಿಸಿಕೊಂಡಿರುವ ಜಗದಂಬೆಯನ್ನು ನೋಡಿ ನಮಸ್ಕಾರಮಾಡಿ, “ಅಮ್ಮಾ, ನಮ್ಮ ಒಡೆಯ ಶುಂಭೇಂದ್ರನು ದೇವತೆಗಳನ್ನೆಲ್ಲಾ ಜಯಿಸಿ ಮೂರು ಲೋಕಗಳನ್ನೂ ಪಾಲಿಸುತ್ತಿದ್ದಾನೆ. ಅವನ ರೂಪ, ಮನ್ಮಥಾಕಾರನೆಂದರೆ ಸಾಕು. ನಾನು ಯಾರು ಗೊತ್ತೇ? ಅವನ ದೂತನಾಗಿ ಬಂದಿದ್ದೇನೆ. ನಿನ್ನನ್ನು ಕುರಿತು ಕೇಳಿ, ಆತನಿಗೆ ನಿನ್ನ ಮೇಲೆ ಮೋಹ ಹುಟ್ಟಿತು. ಅದಕ್ಕೇ ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ. ಆತನು ನಿನ್ನನ್ನು ತನ್ನ ಹಿರಿಯ ರಾಣಿಯಾಗಿ ಮಾಡಿಕೊಂಡು ನಿನಗೆ ವಿಧೇಯನಾಗಿರುವೆನೆಂದು ಹೇಳುವಂತೆ ಹೇಳಿದ್ದಾನೆ. ಹೇಳಿದ ಮಾತು ತಪ್ಪುವವನಲ್ಲ” ಎಂದು ಹೇಳಿದನು.

ಅವನ ಮಾತುಗಳನ್ನು ಕೇಳಿ ಮಹಾದೇವಿ ಕಿರುನಗುವನ್ನು ಸೂಸುತ್ತ, “ನಿನ್ನ ರಾಜನು ದೇವತೆಗಳೆಲ್ಲರನ್ನೂ ಜಯಿಸಿದನೆಂದು ಕೇಳಿ, ಅಷ್ಟು ದೊಡ್ಡವನನ್ನು ಸಂಧಿಸಬೇಕೆಂತಲೇ ನಾನು ಇಲ್ಲಿಗೆ ಬಂದೆನು. ಈ ಮಾತನ್ನು ಅವನೊಂದಿಗೆ ಹೇಳಿ, ಮುಖ್ಯವಾದ ಇನ್ನೊಂದು ಸಂಗತಿಯನ್ನೂ ಅವನೊಂದಿಗೆ ಹೇಳಿಬಿಡು. ಅದೇನಂದರೆ, ನನ್ನನ್ನು ಯುದ್ಧದಲ್ಲಿ ಸೋಲಿಸಿದ ವೀರನನ್ನು ಹೊರತು ಬೇರೆ ಯಾರನ್ನೂ ಮದುವೆಮಾಡಿಕೊಳ್ಳಲಾರನೆಂಬುದು ನನ್ನ ವ್ರತ. ಈ ವ್ರತವನ್ನು ಹಿಡಿದು ಬಹಳ ಕಾಲವಾಯಿತು. ಈ ವರೆಗೂ ನನ್ನ ಗರ್ವವನ್ನು ಅಡಗಿಸಿದ ವೀರನು ಕಂಡುಬರಲಿಲ್ಲ. ನಿನ್ನ ಯಜಮಾನನು ಆ ಕೆಲಸಮಾಡಿ ನನ್ನ ಕೈಹಿಡಿಯಲಿ. ಹೋಗಿ ಹೇಳು” ಎಂದಳು.

ಈ ಮಾತು ಕೇಳಿ ಸುಗ್ರೀವನು, ಆಶ್ಚರ್ಯಪಡುತ್ತ, “ಅಮ್ಮಾ, ಸ್ತ್ರೀ ಸಹಜವಾದ ದುಸ್ಸಾಹಸದಿಂದ ಹೀಗೆ ಹೇಳುವೆಯೇ ಹೊರತು, ಈ ಶುಂಭೇಂದ್ರನ ಹೆಸರು ಹೇಳಿದರೇನೇ ಎಂತೆಂಥವರೆಲ್ಲಾ ಪ್ರಲಾಪಿಸಿಬಿಡುತ್ತಾರೆ ಗೊತ್ತಾ? ಇಂತಹ ಹುಚ್ಚು ಆಲೋಚನೆಯನ್ನು ಬಿಟ್ಟು ಶುಂಭನನ್ನೋ ಅವನ ತಮ್ಮನಾದ ನಿಶುಂಭನನ್ನೋ ವರಿಸಿಕೊಂಡು ಸುಖವಾಗಿರು.” ಎಂದನು.

ಅದಕ್ಕೆ ಅಂಬಾದೇವಿ, “ನನ್ನ ವ್ರತವನ್ನು ಎಂದಿಗೂ ಬಿಡುವವಳಲ್ಲ, ನನ್ನ ಶೂಲಕ್ಕೆ ಬೆದರುವವನನ್ನು ನಾನು ಹೇಗೆ ಮದುವೆಮಾಡಿಕೊಳ್ಳಲಿ? ನನ್ನೊಂದಿಗೆ ಯುದ್ಧಕ್ಕೆ ಬರಲು ಹಿಂಜರಿದನಾದರೆ ನಿನ್ನ ಆ ಯಜಮಾನನು ಸ್ವರ್ಗ ಮೃತ್ಯು ಲೋಕಗಳನ್ನು ಬಿಟ್ಟು ಬಂಧುಮಿತ್ರ ಪರಿವಾರದೊಂದಿಗೆ ರಸಾತಲಕ್ಕೆ

"ಹೋಗಲು ಹೇಳು. ನನ್ನ ಮಾತುಗಳನ್ನು ಇದ್ದುದಿದ್ದ ಹಾಗೆಯೇ ಹೇಳಬೇಕು; ಹೋಗು" ಎಂದಳು.

ಸುಗ್ರೀವನು ಅಂಜಿ ಮುಂಕುಬಡೆದವನಂತೆ ಶುಂಭನ ಬಳಿಗೆ ಹೋಗಿ, ಮುಂದಾಗಿ ಕ್ಷಮಾಪಣೆ ಕೇಳಿಕೊಂಡು, ಮಹಾದೇವಿ ಹೇಳಿದ ಮಾತುಗಳನ್ನು ಅವಳು ಹೇಳಿದ ಹಾಗೆಯೇ ಹೇಳಿದನು.

ಶುಂಭನು ಆಶ್ಚರ್ಯಪಡುತ್ತ, "ಕೇಳಿದೆಯೋ, ನಿಶುಂಭಾ, ಯಾವಳೋ ಹೆಂಗುಸೊಬ್ಬಳು ಇನ್ನೊಬ್ಬಳನ್ನು ಜತೆಗೂಡಿಕೊಂಡು ನಮ್ಮ ಹತ್ತಿರ ಯುದ್ಧ ಮಾಡುವೆನೆಂದು ಬಂದಿದ್ದಾಳಂತೆ. ನೀನು ಹೋಗುವೆಯಾ, ಅಲ್ಲ ನಾನೇ ಹೋಗಲೋ?" ಎಂದು ಕೇಳಿದನು. "ನೀನೂ ಬೇಡ, ನಾನೂ ಬೇಡ. ಧೂಮ್ರಲೋಚನನನ್ನು ಕಳುಹಿಸಿದರೆ ಅವಳನ್ನು ಜಯಿಸಿ ಹಿಡಿದು ತರುತ್ತಾನೆ. ಮರುಕ್ಷಣದಲ್ಲಿ ಅವಳು ನಿನ್ನ ರಾಣಿಯಾಗುತ್ತಾಳೆ. ಆಗಲೇ ಬೇಕು" ಎಂದನು ನಿಶುಂಭ ನಗುತ್ತ.

ಅದೇ ಸರಿಯೆಂದುಕೊಂಡು ಶುಂಭನು ಧೂಮ್ರಲೋಚನನನ್ನು ಕರೆದು, "ನೀನು ಉದ್ಯಾನವನಕ್ಕೆ ಹೋಗಿ ಆ ಸುಂದರಿಯ ಸಹಾಯಕಳಾಗಿರುವ ಕರಾಳಿಯನ್ನು ಕೊಂದು ಸುಂದರಿಯನ್ನು ಕರೆದುಕೊಂಡು ಬಾ. ಅವಳು ನಿನ್ನ ಮೇಲೆ ಸಣ್ಣಗೆ ಬಾಣ ಪ್ರಯೋಗ ಮಾಡಿದರೂ ನೀನು ಅವಳನ್ನು ಕ್ರೂರವಾದ ಬಾಣಗಳಿಂದ ಹಿಂಸಿಸಿಬಿಡಬೇಡ ತಿಳಿಯಿತೆ? ಅವಳಿಗೆ ಸ್ವಲ್ಪವೂ ಧಕ್ಕೆ ತಗಲದಂತೆ ಕರೆದುಕೊಂಡು ಬಾ, ನೋಡೋಣ" ಎಂದನು.

ಧೂಮ್ರಲೋಚನನು ಯುದ್ಧಕ್ಕೆ ಹೋಗುವವನಂತೆ ಸೇನಾ ಸಮೇತನಾಗಿ ಮಹಾದೇವಿಯ ಬಳಿಗೆ ಹೋಗಿ, ತನ್ನ ಯಜಮಾನನ ಪ್ರೇಮ ಸಂದೇಶವನ್ನು ಅವಳಿಗೆ ತಿಳಿಯಪಡಿಸಿದನು. ಅವಳ ಮಾತಿಗೆ ಉತ್ತರ ಕೊಡುವಂತೆ ದೇವಿ ಕೌಶಿಕಿಗೆ ಸನ್ನೆ ತೋರಿಸಿದಳು. ಕೂಡಲೇ ಕಾಳಿಕೆ ಧೂಮ್ರಲೋಚನನನ್ನು




ನೋಡಿ, "ಯಾರೋ ನೀನು ನಾಚಿಗೆಗೇಡಿಯೇ? ವಿಟ ಪುರುಷನ ಹಾಗೆ ಮಾತಾಡುವೆಯಾ? ಕೈಲಾದರೆ ಯುದ್ಧ ಮಾಡು. ಇಲ್ಲದಿದ್ದರೆ ನಡೆಯಾಚೆ. ನಮ್ಮ ದೇವಿ ಇಲ್ಲಿಗೇಕೆ ಬಂದಳೆಂದುಕೊಂಡೆ? ನಿಮ್ಮ ಶುಂಭ, ನಿಶುಂಭರನ್ನು ಯಮಪುರಿಗೆ ಕಳುಹಿಸಲಿಕ್ಕೇ!" ಎಂದಳು.

ಧೂಮ್ರಲೋಚನನು ಕೋಪದಿಂದ ಉರಿಯುತ್ತ, "ನೀನೇ ಜಗಳಕ್ಕೆ ಮುಂಗಾಲು ಕೆರೆಯುವಿಯಾ? ನಿನ್ನ ಗರ್ವವನ್ನು ಅಡಗಿಸಲಾಗದೆ ಇಷ್ಟು ಹೊತ್ತೂ ಮಾತಾಡಿದೆನೆಂದುಕೊಳ್ಳುವಿಯಾ? ತಕ್ಕೋ ನನ್ನ ಪೆಟ್ಟು!" ಎಂದು ಹೇಳಿ ಕಾಳಿಕೆಯೊಂದಿಗೆ ಯುದ್ಧಕ್ಕೆ ತಲೆ ಹಾಕಿ, ತನ್ನ ಸೈನ್ಯವನ್ನೆಲ್ಲಾ ಕಳೆದುಕೊಂಡು ಕಡೆಗೆ ಅವನೂ ಸತ್ತುಬಿದ್ದನು.

ಮಹಾದೇವಿ ದಿಕ್ಕುಗಳು ಕಿವಿಡಾಗುವಂತೆ ಶಂಖಾರಾವಮಾಡಿದಳು. ಅದನ್ನು ಕೇಳಿ ಶುಂಭನು ಅದುರಿಬಿದ್ದು, ಏನೋ ಹೋಗುವ ಕಾಲ ಬಂತೆಂದುಕೊಂಡು ಗಾಬರಿಯಿಂದ ಓಡೋಡಿ ಬಂದು ನೋಡಿದನು.

ಅಲ್ಲಿ ಧೂಮ್ರಲೋಚನನ ಗುರುತೂ ಕಾಣಲಿಲ್ಲ. ಸೈನ್ಯಗಳ ಜಾಡೂ ಇರಲಿಲ್ಲ. ಕೆಳಗೆ ನೋಡಿದರೆ ಎಲ್ಲರೂ ಸತ್ತು ಶವಗಳಾಗಿ ಬಿದ್ದಿದ್ದಾರೆ. ಅವರ ಕುದುರೆಗಳೂ ಸಿಕ್ಕಾಬಟ್ಟೆ ಸತ್ತು ಬಿದಿದ್ದುವು. ಒಬ್ಬಿಬ್ಬರು ಹತಶೇಷರು ಓಡಿಬಂದು ನಡೆದ ಸಂಗತಿಯನ್ನು ಶುಂಭನೊಡನೆ ಹೇಳಿದರು.

ಶುಂಭನ ಪ್ರಣಯಕಥೆ ತಲೆ ಕೆಳಗಾಗಿ ಹೋಗಿತ್ತು. ಮಾಡಿದರೆ ದೇವಿಯೊಂದಿಗೆ ಯುದ್ಧಮಾಡಬೇಕು. ಇಲ್ಲವೇ ಸಂಧಿಮಾಡಿಕೊಳ್ಳಬೇಕು. ಸಂಧಿಮಾಡಿಕೊಳ್ಳುವುದೆಂದರೆ ರಸಾತಲಕ್ಕೆ ಓಡಿಹೋಗುವುದೇ! ಹಾಗೇಕೆ? ಶುಂಭನ ಬಳಿಯಲ್ಲಿರುವ ವೀರರಿಗೆ ಕಡಿಮೆಯೇ? ಆಕೆಯೊಂದಿಗೆ ಯುದ್ಧಮಾಡುವಂಥ ಶೂರರು ಶುಂಭನೊಂದಿಗೆ ಬಹಳಮಂದಿ ಇರುವರು.

ಮೊದಲು ಚಂಡ, ಮುಂಡರು ಮಹಾದೇವಿಯೊಂದಿಗೆ ಯುದ್ಧಕ್ಕೆ ಹೊರಟರು. ಅವರು ಸತ್ತು ಬಿದ್ದ ಮೇಲೆ, ಶುಂಭನ ಪ್ರೇರಣೆಯಂತೆ ರಕ್ತಬೀಜನು ದೇವಿಯ ಮುಂದೆ ಹೋಗಿ, "ಇನ್ನು ಯುದ್ಧದ ಗೊಡವೆ ಬಿಟ್ಟು ಶುಂಭನನ್ನೋ ನಿಶುಂಭನನ್ನೋ ವರಿಸಿ ಸುಖವಾಗಿರು" ಎಂದು ಬುದ್ಧಿ ಹೇಳಿದನು.

"ನನ್ನೊಡನೆ ಯುದ್ಧಮಾಡಿ ಗೆದ್ದವನನ್ನೇ ನಾನು ಮದುವೆಮಾಡಿಕೊಳ್ಳುವುದೆಂದು ಮೊದಲೇ ತಿಳಿಸಿಯಾಗಿದೆ. ಮತ್ತೆ ಮತ್ತೆ ಅರ್ಥವಿಲ್ಲದ ಮಾತು ಹೇಳಬೇಡ. ನಿನ್ನ ಆ ಶುಂಭ ನಿಶುಂಭರೇ ಬಂದು ನನ್ನೊಂದಿಗೆ ಹೋರಾಡಲು ಹೇಳು, ಹೋಗು" ಎಂದಳು ದೇವಿ.

"ಇಷ್ಟೊಂದು ಗರ್ವಿಷ್ಠಳಾದ ನಿನಗೆ ಬುದ್ಧಿ ಕಲಿಸಲಿಕ್ಕೆ ನಾನೇ ಸಾಕು. ನನ್ನೊಂದಿಗೇ ಯುದ್ಧ ಮಾಡು" ಎಂದು ರಕ್ತಬೀಜನು ಯುದ್ಧಕ್ಕೆ ಪ್ರಾರಂಭಿಸಿ, ದೇವಿಯ ಒಂದೇ ಪೆಟ್ಟಿಗೆ ತನ್ನ ರಥದಲ್ಲೇ ಮೂರ್ಛೆ ಹೋಗಿಬಿದ್ದನು.

ಆದರೆ ರಕ್ತಬೀಜನ ರಕ್ತವು ನೆಲದ ಮೇಲೆ ಬಿದ್ದರೆ ಒಂದೊಂದು ಬೊಟ್ಟಿಗೆ ಒಬ್ಬೊಬ್ಬ ರಕ್ತಬೀಜನು ಹುಟ್ಟಿ ಬರುತ್ತಾನೆ. ಇಡೀ ರಣರಂಗವೇ ರಕ್ತಬೀಜಮಯವಾಗುತ್ತದೆ. ಅದರಂತೆ ಅನೇಕಮಂದಿ ರಕ್ತಬೀಜರು ಹುಟ್ಟಲೂ ತೊಡಗಿದರು. ಈ ವಿಪರೀತವನ್ನು ನೋಡಿ ದೇವಿ ಕಾಳಿಯನ್ನು ಕರೆದು, ಅವನ ರಕ್ತವು ನೆಲದ ಮೇಲೆ ಬೀಳುವುದಕ್ಕೆ ಮೊದಲೇ ಕುಡಿದುಬಿಡಲು ಹೇಳಿದಳು. ಅನಂತರ ಮಹಾದೇವಿ ಆ ರಕ್ತಬೀಜಂದಿರನ್ನೂ, ಅಸಲು ರಕ್ತ ಬೀಜಾಸುರನನ್ನೂ ಕೊಂದುಬಿಟ್ಟಳು. ಅವರ ರಕ್ತವು ನೆಲಕ್ಕೆ ಬೀಳುವ ಮೊದಲೇ ಕಾಳಿಕೆ ಕುಡಿದುಬಿಟ್ಟಳು.

ಕಟ್ಟಕಡೆಗೆ ಮಹಾದೇವಿಯೊಂದಿಗೆ ಯುದ್ಧಮಾಡಿ ಸತ್ತವರು ಶುಂಭ, ನಿಶುಂಭರು. ಉಳಿದ ರಾಕ್ಷಸರು ದೇವಿಗೇ ಶರಣಾಗತರಾಗಿ ಅವಳಿಂದ ಅಭಯದಾನ ಪಡೆದು, ಪಾತಾಳಕ್ಕೆ ಹೊರಟುಹೋದರು.





# ತುಡುಗಬುದ್ಧಿ

**ಹಿಂದೆ** ಒಂದಾನೊಂದು ರಾಜ್ಯದಲ್ಲಿ ಕಳ್ಳತನಗಳು ವಿಪರೀತವಾಗಿದ್ದುವು. ರಾಜಭಟರು ಹಟಹಿಡಿದು ಹುಡುಕಾಡುತ್ತಿದ್ದರು. ಸಿಕ್ಕಿಬಿದ್ದ ಪ್ರತಿ ಕಳ್ಳನನ್ನೂ ಊರ ಹೊರಗೆ ಬಹಿರಂಗವಾಗಿ ಗಲ್ಲಿಗೇರಿಸುವಂತೆ ರಾಜನು ಅಪ್ಪಣೆ ಮಾಡಿದ್ದನು. ಅದೇವಿಧವಾಗಿ ಸಿಕ್ಕಿಬಿದ್ದ ಅನೇಕಮಂದಿ ಕಳ್ಳರು ಗಲ್ಲಿಗೇರಿಸಲ್ಪಟ್ಟರು. ಅದರಿಂದ ಅನೇಕ ಕಳ್ಳರು ಕಳ್ಳತನವನ್ನು ಬಿಟ್ಟರು. ಕೆಲವರು ದೇಶಾಂತರಕ್ಕೆ ಓಡಿದರು.

ಆ ರಾಜ್ಯದೊಳಗೆ ಸಣ್ಣಪ್ಪ, ಚಿನ್ನಪ್ಪ ಎಂಬ ಇಬ್ಬರು ಜತೆ ಕಳ್ಳರಿದ್ದರು. ಸಿಕ್ಕಿಬಿದ್ದ ಅನೇಕ ಕಳ್ಳರು ಗಲ್ಲಿನಲ್ಲಿ ಸತ್ತುದನ್ನು ನೋಡಿ ಹೆದರಿ ಸಣ್ಣಪ್ಪ, ಚಿನ್ನಪ್ಪಂದಿರು ತಾವಿನ್ನು ಕಳ್ಳತನಗಳನ್ನು ಬಿಟ್ಟು ಬಿಡುವುದೇ ಒಳ್ಳೆಯದೆಂದುಕೊಂಡರು.

"ನಾವು ಇಷ್ಟು ಕಾಲದವರೆಗೆ ತುಂಬಾ ಪಾಪ ಮಾಡಿದೆವು. ಇನ್ನು ಮೇಲೆ ಒಳ್ಳೆಯ ರೀತಿಯಲ್ಲಿ ಬದುಕೋಣ" ಎಂದುಕೊಂಡು ಅವರಿಬ್ಬರೂ ಪಕ್ಕದ ಗ್ರಾಮಕ್ಕೆ ಹೋದರು. ಅಲ್ಲಿಯ ದೊಡ್ಡ ಶ್ರೀಮಂತನಾದ ರೈತನ ಮನೆಯಲ್ಲಿಕೆಲಸ ಸಂಪಾದಿಸಿ ಕೊಂಡರು. ದಿನಾ ಎತ್ತುಗಳನ್ನು ಹುಲ್ಲುಗಾವಲಿಗೆ ಹೊಡೆದುಕೊಂಡು ಹೋಗಿ ಮೇಯಿಸಿಕೊಂಡು ಬರುವುದು ಸಣ್ಣಪ್ಪನ ಕೆಲಸ. ತೋಟದ ಮರಗಿಡ ಗಳಿಗೆ ನೀರು ಹಾಯಿಸುವುದು ಚಿನ್ನಪ್ಪನ ಕೆಲಸ.

ಮೊದಲನೇದಿನ ಸಣ್ಣಪ್ಪನು ಬೆಳಗಿನ ಹೊತ್ತಿನಲ್ಲಿ ಎತ್ತುಗಳನ್ನು ಹೊಡೆದುಕೊಂಡು ಗುಡ್ಡಗಳಲ್ಲಿಯ ಹುಲ್ಲುಮೈದಾನಗಳ ಕಡೆಗೆ ಹೋದನು. ಎತ್ತುಗಳು ಅವನನ್ನು ಪಡಲಾಗದ ಕಷ್ಟಗಳಿಗೆ ಗುರಿಪಡಿ ಸಿದುವು. ಅವುಗಳು ತಮ್ಮೊಳಗೆ ಹಾದಾಡಿಕೊಳ್ಳು ವುದೂ, ಸಿಕ್ಕಾಬಟ್ಟೆ ಓಡುವುದೂ, ಅಕ್ಕಪಕ್ಕ ಗಳಲ್ಲಿದ್ದ ಹೊಲಗದ್ದೆಗಳಿಗೆ ನಗ್ಗುವುದೂ ಹೀಗೆಲ್ಲ ಹರಾಮಿತನ ಮಾಡುತ್ತಿದ್ದುವು. ಅವುಗಳನ್ನು ಹತೋಟಿಗೆ ತರುವುದೆಂದರೆ ಸಣ್ಣಪ್ಪನಿಗೆ ಸಾಕೋ ಸಾಕಾಯಿತು.

ಇತ್ತ ಚಿನ್ನಪ್ಪನು ತೋಟದಲ್ಲಿರುವ ಗಿಡಮರ ಗಳಿಗೆ ನೀರು ಹೊಯ್ಯಲು ತೊಡಗಿದನು. ಅವನು ಎಷ್ಟು ಬಿಂದಿಗೆ ನೀರು ಎಳೆದು ಸುರಿದರೂ ಮರ ಗಳಿಗೆ ಸಾಕಾಗಲಿಲ್ಲ. ಅರ್ಧತೋಟವು ನೆನೆಯು ವುದಕ್ಕೆ ಮೊದಲೇ ಅವನ ಕೈಗಳು ಸೋತು ಸುಣ್ಣಾದುವು. ಸೊಂಟ ಮುರಿದಷ್ಟು ನೋವಾಯಿತು.

**೨೫ ವರ್ಷಗಳ ಹಿಂದಿನ ಚಂದಮಾವು ಕಥೆ**




ಸಾಯಂಕಾಲದವರೆಗೂ ನೀರು ಸೇದಿ ಹೊತ್ತು ಹೊಯ್ಯುವುದೇ ಅವನ ಕೆಲಸವಾಯಿತು.

ರಾತ್ರಿಯಲ್ಲಿ ಸಣ್ಣಪ್ಪನೂ ಚಿನ್ನಪ್ಪನೂ ಹತ್ತಿರ ಹತ್ತಿರ ಮಲಗಿ, ತಮ್ಮ ತಮ್ಮ ಕೆಲಸಗಳನ್ನು ಕುರಿತು ಮಾತಾಡತೊಡಗಿದರು.

"ನನ್ನ ಕೆಲಸ ತುಂಬಾ ಸುಲಭ. ಕೆಲಸಮಾಡಿದಂತೆಯೇ ಕಾಣಲಿಲ್ಲ. ಎತ್ತುಗಳನ್ನು ಮೇಯಲು ಬಿಟ್ಟು ಮರದ ನೆರಳಿನಲ್ಲಿ ಮಲಗಿ ಗಮ್ಮತು ನಿದ್ದೆ ಮಾಡಿದೆ. ಸಾಯಂಕಾಲದ ಹೊತ್ತಿಗೆ ಎತ್ತುಗಳು ತಮಗೆ ತಾವೇ ನನ್ನ ಹತ್ತಿರ ಬಂದು ಸೇರಿದುವು. ಅವುಗಳ ಕೊರಳ ಗೆಜ್ಜೆಯ ಸುನಾದ ಕೇಳುತ್ತಾ ನಿದ್ದೆಯಿಂದೆದ್ದು ಅವುಗಳನ್ನು ಹೊಡೆದುಕೊಂಡು ಮನೆಗೆ ಬಂದುಬಿಟ್ಟೆ" ಎಂದನು ಸಣ್ಣಪ್ಪ.

"ನಾನೂ ಅಷ್ಟೇ. ನಾಲ್ಕು ಬಿಂದಿಗೆ ನೀರು ಸೇದಿ ಹಾಕಿದೆನೋ ಇಲ್ಲವೋ, ತೋಟವೆಲ್ಲಾ ನೀರಿನಿಂದ ತುಂಬಿಹೋಯಿತು. ಆಮೇಲೆ ಮಂಚ ಹಾಕ್ಕೊಂಡು ಸ್ವಸ್ಥ ನಿದ್ದೆಮಾಡಿದೆ. ಜಿಲುಜಿಲು ಅಂತ ತಣ್ಣಗೆ ಸುಖನಿದ್ದೆ" ಎಂದನು ಚಿನ್ನಪ್ಪ.

"ಭೇಷ್! ನಾಳೆ ಕುಶಾಲಾಗಿ ನೀನು ಎತ್ತುಗಳನ್ನು ಮೇಯಿಸಿಕೊಂಡು ಬಾ. ನಾನು ತೋಟದ ನೀರು ನೋಡಿಕೊಳ್ಳುತ್ತೇನೆ. ಹೀಗೆ ದಿನಾ ಬದಲಾಯಿಸಿಕೊಂಡು ಹಾಯಾಗಿರೋಣ" ಎಂದನು ಸಣ್ಣಪ್ಪ. ಚಿನ್ನಪ್ಪ ಕೂಡಾ "ನಾನೂ ಅದನ್ನೇ ಹೇಳುವಾಂತ ಇದ್ದೆ" ಎಂದನು.

"ಎತ್ತುಗಳೊಂದಿಗೆ ಹೊರಡುವಾಗ ನೆನಪಿನಿಂದ ಮಂಚ ಕೂಡಾ ಹೊತ್ತುಕೊಂಡು ಹೋಗು. ಮರದ ನೆರಳಿನಲ್ಲಿ ಮೆತ್ತಗೆ ಮಲಗಬಹುದು" ಎಂದು ಉತ್ಸಾಹದಿಂದ ಹೇಳಿದ ಸಣ್ಣಪ್ಪ.

ಅಂದ ಹಾಗೆಯೇ ಮರುದಿನ ಅವರಿಬ್ಬರೂ ತಮ್ಮ ತಮ್ಮ ಕೆಲಸಗಳನ್ನು ಬದಲಾಯಿಸಿಕೊಂಡರು. ಆಗ ಒಬ್ಬನ ಮೋಸ ಇನ್ನೊಬ್ಬನಿಗೆ ತಿಳಿದುಹೋಯಿತು. ಆದರೆ ಸಣ್ಣಪ್ಪನು ಇನ್ನೊಂದು ವಿಚಿತ್ರ ಸಂಗತಿಯನ್ನು ಗಮನಿಸಿದನು. ತೋಟದ ಒಂದು ಮಾವಿನ ಮರದ ಬುಡದಲ್ಲಿ ಎಷ್ಟು ಬಿಂದಿಗೆ ನೀರು ಸುರಿದರೂ ಇಂಗಿ ಹೋಗುತ್ತಿದ್ದಿತು. ಅದರ ರಹಸ್ಯವೇನೆಂಬುದನ್ನು ರಾತ್ರಿಯಲ್ಲಿ ಕಂಡು ಹಿಡಿಯಬೇಕೆಂದುಕೊಂಡನು ಸಣ್ಣಪ್ಪ.

ಇಬ್ಬರೂ ಒಬ್ಬನನ್ನೊಬ್ಬ ಮೋಸಪಡಿಸಿದವರಾದುದರಿಂದ, ರಾತ್ರಿ ಇಬ್ಬರೂ ತಮ್ಮ ಕೆಲಸಗಳನ್ನು ಕುರಿತು ಮಾತಾಡದೆ ಮಲಗಿಕೊಂಡರು. ಸ್ವಲ್ಪಹೊತ್ತಿಗೆ ಇಬ್ಬರೂ ನಿದ್ದೆ ಹಿಡಿದವರ ಹಾಗೆ ಗೊರಿಕೆ ಎಬ್ಬಿಸಿದರು. ಮಧ್ಯ ರಾತ್ರಿಯ ಹೊತ್ತಿನಲ್ಲಿ ಸಣ್ಣಪ್ಪನು ಎದ್ದು ಪಕ್ಕದಲ್ಲಿದ್ದ ಗುದ್ದಲಿಯನ್ನೆತ್ತಿಕೊಂಡು ತೋಟದ ಮಾವಿನ ಮರದ ಬದಿಗೆ ಹೋಗಿ ಅದರ ಬುಡದಲ್ಲಿ ಅಗೆಯಲು ತೊಡಗಿದನು. ಅದೊಂದು ಹೆಗ್ಗಣದ ಬಿಲವಾಗಿದ್ದು ಗುದ್ದಲಿ ತಳಕ್ಕೆ ತಾಗಿ ಖಂಗೆಂದಿತು.

ಆ ಕೂಡಲೇ ಅವನು ಅಗೆಯುವುದನ್ನು ನಿಲ್ಲಿಸಿ ಸುತ್ತಲೂ ನೋಡಿದನು. ಪಕ್ಕದಲ್ಲೇ ಕತ್ತಲೆಯಲ್ಲಿ ಚಿನ್ನಪ್ಪನು ನಿಂತಿರುವುದು ಕಂಡಿತು. "ಏನು ಈ ರಾತ್ರಿಯಲ್ಲಿ ಅಗೆಯುವಿಯಲ್ಲ? ಏಕೆ?" ಎಂದು ಕೇಳಿದ ಚಿನ್ನಪ್ಪ.

"ಇದರ ಕಟ್ಟೆ ಸರಿಯಾಗಿಲ್ಲ. ನಿದ್ದೆ ಬಾರದ್ದರಿಂದ ಇದನ್ನು ಸರಿಮಾಡೋಣವೆಂದು ಬಂದೆ" ಎಂದ ಸಣ್ಣಪ್ಪ ಏನೂ ಅರಿಯದವನಂತೆ.

"ಖಂಗನೆ ಏನೋ ಶಬ್ದವಾಯಿತಲ್ಲ? ಏನದೂ?" ಎಂದು ಚಿನ್ನಪ್ಪ ನಗುವನ್ನು ಹತ್ತಿಕ್ಕಿ ಕೊಂಡು ಪುನಃ ಕೇಳಿದ.

"ಯಾವುದೋ ಕಲ್ಲಾಗಿದ್ದೀತು. ಸಾಯಲಿ, ನಾಳೆ ನೋಡಿದರಾಯಿತು. ಮಲಗೋಣ ನಡೆ" ಎಂದು ಎದ್ದನು ಸಣ್ಣಪ್ಪ.

ಇಬ್ಬರೂ ಹಿಂದಿರುಗಿ ಬಂದು ಮಲಗಿಕೊಂಡರು. ಚಿನ್ನಪ್ಪನಿಗೆ ನಿದ್ದೆ ಹಿಡಿದ ಮೇಲೆ, ಸಣ್ಣಪ್ಪನು ಎದ್ದು ಹೋಗಿ ಗುದ್ದಲಿಗೆ ತಾಗಿ ಶಬ್ದವಾದುದೇನೆಂದು ನೋಡಬೇಕೆಂದುಕೊಂಡಿದ್ದನು. ಆದರೆ ಮೊದಲು ಅವನಿಗೇ ಗಟ್ಟಿನಿದ್ದೆ ಹಿಡಿದುಕೊಂಡಿತು.

ಸಣ್ಣಪ್ಪನಿಗೆ ನಿದ್ದೆಯ ಗುರಿಕೆ ಶುರುವಾದ ಕೂಡಲೇ ಚಿನ್ನಪ್ಪನು ಎದ್ದನು. ಗುದ್ದಲಿ ತೆಗೆದು ಕೊಂಡು ಮಾವಿನ ಮರದ ಬಳಿಗೆ ಹೋದನು. ಅಲ್ಲಿ ಅಗೆದು ನೋಡಲು, ಒಂದಲ್ಲ, ಎರಡು ನಿಧಿ ಭಾಂಡಗಳು ಸಿಕ್ಕಿದುವು. ಅವುಗಳನ್ನು ಎಲ್ಲಿಯಾದರೂ ಕೂಡಲೇ ಅಡಗಿಸಿಡಬೇಕಾಗಿತ್ತು. ಸಮೀಪದಲ್ಲಿರುವ ಕೆರೆಯಲ್ಲಿ ಅಷ್ಟೇನೂ ಆಳವಿಲ್ಲದ ನೀರಿನ ಬದಿಯಲ್ಲಿ ಆ ಭಾಂಡಗಳನ್ನು ಹುಗಿದಿಟ್ಟು, ಚಿನ್ನಪ್ಪನು ಏನೂ ತಿಳಿಯದವನಂತೆ ಬಂದು ಮಲಗಿಕೊಂಡು ನಿದ್ದೆಗೆ ತೊಡಗಿದನು.

ಸಣ್ಣಪ್ಪನಿಗೆ ಬೆಳಂಜಾಮದಲ್ಲೇ ಎಚ್ಚರವಾಯಿತು. ಗುದ್ದಲಿ ತೆಗೆದುಕೊಂಡು ಮಾವಿನ ಮರದ ಬಳಿಗೆ ಬೇಗಬೇಗನೆ ಹೋದನು. ನೋಡುವಾಗ ಅಲ್ಲಿದ್ದ ನಿಧಿ ಭಾಂಡಗಳನ್ನು ಎಬ್ಬಿಸಿ ತೆಗೆದ ಸೂಚನೆ ಗೊತ್ತಾಯಿತು. ಹಿಂದಿರುಗಿ ಬಂದು ನಿದ್ದೆ





ಮಾಡುತ್ತಿದ್ದ ಚಿನ್ನಪ್ಪನ ಕಾಲುಗಳನ್ನು ಪರೀಕ್ಷಿಸಿದನು. ಅವನ ಕಾಲಿನ ಬೆರಳಿಗಳೆಡೆಯಲ್ಲಿ ಕೆಸರಿನ ಅಂಟೂ, ಪಾಚಿಯ ಗುರುತೂ ಕಾಣಿಸಲು, ಅಗೆದೆಬ್ಬಿಸಿದ ವಸ್ತುಗಳನ್ನು ಚಿನ್ನಪ್ಪನು ಕೆರೆಯ ಬದಿಯಲ್ಲಿ ಅಡಗಿಸಿದ್ದಾನೆಂದು ತಿಳಿದು, ನೇರಾಗಿ ಕೆರೆಗೆ ಹೋದನು. ಕೆರೆಯ ಒಂದು ಬದಿಯಲ್ಲಿ ಕಪ್ಪೆಗಳ ಚಲನವಿರಲಿಲ್ಲ. ಅಲ್ಲಿಯೇ ಕೆದಕಿ ಹುಡುಕಿ, ಹುಗಿದಿಟ್ಟ ಭಾಂಡಗಳನ್ನು ಎತ್ತಿಕೊಂಡನು. ಅವುಗಳನ್ನು ಹೆಗಲಿನ ಮೇಲೆ ಹೊತ್ತುಕೊಂಡು ನೆಟ್ಟಗೆ ತನ್ನ ಗ್ರಾಮದ ಕಡೆಗೆ ನಡೆದನು.

ಸ್ವಲ್ಪ ಹೊತ್ತಿಗೆ ಚಿನ್ನಪ್ಪನೂ ನಿದ್ದೆಯಿಂದೆದ್ದನು. ಪಕ್ಕದಲ್ಲಿ ಸಣ್ಣಪ್ಪನು ಕಾಣದಿರುವುದನ್ನು ನೋಡಿದನು. ಕೂಡಲೇ ಕೆರೆಯ ಕಡೆಗೆ ಓಡಿ ಹೋಗಿ, ತಾನು ಹುಗಿದಿಟ್ಟ ನಿಧಿ ಭಾಂಡಗಳನ್ನು ಹುಡುಕಿದನು. ಅವು ಕಾಣದಿರಲು, ಸಣ್ಣಪ್ಪನು ಅವುಗಳನ್ನು ಎತ್ತಿಕೊಂಡು, ಸ್ವಂತ ಊರಿನ ಕಡೆಗೇ ಹೊರಟನೆಂದು ಗ್ರಹಿಸಿ, ತಾನೂ ಆ ಕಡೆಗೇ ಓಡತೊಡಗಿದನು.

ಸ್ವಲ್ಪಹೊತ್ತು ಚಿನ್ನಪ್ಪನು ಓಡಿದ ಮೇಲೆ, ಮುಂದೆ ಅಷ್ಟು ದೂರದಲ್ಲಿ ನಿಧಿ ಭಾಂಡಗಳನ್ನು ಹೊತ್ತುಕೊಂಡು ಹೋಗುವ ಸಣ್ಣಪ್ಪನನ್ನು ನೋಡಿದನು. ಕೂಡಲೇ ಚಿನ್ನಪ್ಪನು ಡೊಂಕಾದ ಆ ದಾರಿಯನ್ನು ಬಿಟ್ಟು ಅಡ್ಡದಾರಿ ಹಿಡಿದು ಸಣ್ಣಪ್ಪನಿಗಿಂತಲೂ ಮುಂದೆ ಹೋಗಿ, ತನ್ನ ಹೊಸ ಚೆಪ್ಪಲಿಗಳಲ್ಲಿ ಒಂದನ್ನು ಒಂದು ಕಡೆ ಬಿಟ್ಟು, ಎರಡನೇ ಚೆಪ್ಪಲಿಯನ್ನು ಮತ್ತೊಂದು ನೂರು ಗಜ ದೂರದಲ್ಲಿ ಬಿಟ್ಟು, ಅಲ್ಲಿದ್ದ ಒಂದು ಮರದ ಮೇಲೆ ಹತ್ತಿ, ಎಲೆಗಳ ಗುಂಪಿನಲ್ಲಿ ಅಡಗಿ ಕುಳಿತನು.

ಸ್ವಲ್ಪ ಹೊತ್ತಿಗೆ ಸಣ್ಣಪ್ಪನು ಭಾರವಾದ ಭಾಂಡಗಳನ್ನು ಕಷ್ಟದಿಂದ ಹೊತ್ತುಕೊಂಡು ಆ ದಾರಿಯಲ್ಲೇ ಬಂದನು. ಹೊಸ ಚೆಪ್ಪಲಿಯೊಂದು ಅವನ ಕಣ್ಣಿಗೆ ಬಿತ್ತು. ಆದರೆ ಒಂದೇ ಇದ್ದುದನ್ನು ನೋಡಿ ನಿರಾಶೆಯಿಂದ ಬಿಟ್ಟು ಮುಂದೆ ನಡೆದನು. ನೂರಗಜ ಮುಂದೆ ಹೋದ ಮೇಲೆ ಅದರ ಜತೆ ಚೆಪ್ಪಲಿ ಕಂಡಿತು. ಸುತ್ತಲೂ ಯಾರೂ ಇರುವುದು ಕಾಣಲಿಲ್ಲ. ಮತ್ತೆ ಆಶೆ ಹುಟ್ಟಲು ಭಾಂಡಗಳನ್ನು ಕೆಳಗಿಟ್ಟು. ಆ ಚೆಪ್ಪಲಿಯನ್ನು ಎತ್ತಿಕೊಂಡು ಹಿಂದೆ ಬಿಟ್ಟ ಚೆಪ್ಪಲಿಯನ್ನು ತರಲು ಹಿಂದಕ್ಕೆ ಹೋದನು.

ಈ ಸಮಯವನ್ನೇ ಹೊಂಚಿಕೊಂಡಿದ್ದ ಚಿನ್ನಪ್ಪನು ಮೆಲ್ಲನೆ ಮರದಿಂದಿಳಿದು, ದಾರಿಯಲ್ಲಿದ್ದ ನಿಧಿ ಭಾಂಡಗಳನ್ನು ಹೆಗಲ ಮೇಲೆ ಏರಿಸಿಕೊಂಡು, ಶಕ್ತಿಗಳನ್ನೆಲ್ಲಾ ಕಾಲಿಗೆ ಎಳೆದುಕೊಂಡು ವೇಗವಾಗಿ ನಡೆದು ತನ್ನ ಮನೆಯನ್ನು ಸೇರಿಕೊಂಡನು.

ಸಣ್ಣಪ್ಪನು ದಾರಿಯಲ್ಲಿದ್ದ ಎರಡು ಹೊಸ ಚೆಪ್ಪಲಿಗಳನ್ನೂ ತೆಗೆದುಕೊಂಡು ಬಂದು ನೋಡುವಾಗ ಭಾಂಡಗಳೆರಡೂ ಇರಲಿಲ್ಲ. ಇದು ಚಿನ್ನಪ್ಪನ

ಕೆಲಸವೇ ಎಂದು ತಿಳಿದು ಸಣ್ಣಪ್ಪನು ಬೇಗಬೇಗನೆ ನಡೆದು ಸ್ವಲ್ಪ ಹೊತ್ತಿಗೆಲ್ಲಾ ಚಿನ್ನಪ್ಪನ ಮನೆಗೆ ತಲಪಿದನು.

ಆಗ ಆ ಮನೆಯಲ್ಲಿದ್ದವರೆಲ್ಲಾ ಸತ್ತಮನೆಯ ಹಾಗೆ ಆಕ್ರಂದನ ಮಾಡಿಕೊಂಡಿದ್ದರು. ಸಣ್ಣಪ್ಪನು ಆಶ್ಚರ್ಯದಿಂದ ಏನಾಯಿತೆಂದು ಕೇಳಿದನು.

ಅದಕ್ಕೆ ಚಿನ್ನಪ್ಪನ ಹೆಂಡತಿಯೂ ಮಗನೂ ಶೋಕಿಸುತ್ತ ಬಿಕ್ಕುತ್ತ ಚಿನ್ನಪ್ಪನು ಸತ್ತುಹೋದನೆಂದು ಹೇಳಿದರು. ಬಟ್ಟೆ ಮುಸುಗುಹಾಕಿ ನಡುಕೋಣೆಯಲ್ಲಿ ಮಲಗಿಸಿದ್ದ ಚಿನ್ನಪ್ಪನನ್ನು ಕೂಡಾ ತೋರಿಸಿದರು.

ಸ್ವಲ್ಪಹೊತ್ತು ಸಣ್ಣಪ್ಪ ಕೂಡಾ ಅವರೊಂದಿಗೆ ಅತ್ತು ಆದ ಮೇಲೆ ಈವಿಧವಾಗಿ ಹೇಳಿದನು :

"ನಾವಿಬ್ಬರೂ ಎಷ್ಟೋ ಸ್ನೇಹವಾಗಿದ್ದೆವು. ಇನ್ನು ಚಿನ್ನಪ್ಪನ ಕಟ್ಟಕಡೆಯ ಆಶೆಯನ್ನು ತೀರಿಸುವುದರ ಹೊರತು ನಾನು ಮಾಡುವಂಥಾದ್ದು ಏನೂ ಇಲ್ಲ. ತಾನು ನನಗಿಂತ ಮೊದಲು ಸತ್ತುಹೋದರೆ ತನ್ನ ಶವವನ್ನು, ಬೆಳೆಕಡಿದು ಹಾಕಿದ ತೊಗರೀ ಹೊಲದಲ್ಲಿ ತೊಗರೀ ಗುತ್ತಿಗಳ ಮೇಲೆ ಹಾಕಿ ಹೊಲದ ಉದ್ದಕ್ಕೂ ಎಳೆಯಬೇಕೆಂದು ನನಗೆ ಹೇಳಿದ್ದಾನೆ. ಅವನ ಕಟ್ಟಕಡೆಯ ಮಾತನ್ನು ನಡೆಸಿ ಕರ್ತವ್ಯ ಮುಗಿಸುತ್ತೇನೆ !"

ಹೀಗೆ ಹೇಳಿ ಅವನು ಚಿನ್ನಪ್ಪನ ಶರೀರವನ್ನು ಎತ್ತಿ ಹೆಗಲಮೇಲೆ ಹಾಕಿಕೊಂಡು, ಯಾರ ಮಾತುಗಳನ್ನೂ ಕಿವಿಮೇಲೆ ಹಾಕಿಕೊಳ್ಳದೆ, ತೊಗರೀಗುತ್ತಿಗಳಿರುವ ಹೊಲಕ್ಕೆ ಒಯ್ದನು.

ನೆಲದಲ್ಲಿ ಹುಗಿದ ಕತ್ತಿಗಳ ಹಾಗೆ ಕಾಣುವ ತೊಗರೀ ಗುತ್ತಿಗಳನ್ನು ನೋಡಿ ಚಿನ್ನಪ್ಪನಿಗೆ ನಿಜವಾಗಿಯೂ ಸಾಯುವೆನೆಂದು ಭಯವಾಯಿತು. ಇನ್ನು ಸುಮ್ಮನಿದ್ದರೆ ಇವನು ನಿಜಕ್ಕೂ ತನ್ನನ್ನು ಅದರ ಮೇಲೆ ಹಾಕಿ ಎಳೆಯುವನೆಂದು ಹೆದರಿ, ತಟ್ಟನೆ ಅವನ ಹೆಗಲಿನಿಂದ ಕೆಳಕ್ಕೆ ಹಾರಿ, ಅವನ ಕಾಲು ಹಿಡಿದುಕೊಂಡು,

"ಸಣ್ಣಪ್ಪಣ್ಣಾ, ನನ್ನನ್ನು ಕ್ಷಮಿಸಿಬಿಡು. ನಾವು ಕಳ್ಳತನವನ್ನು ಬಿಟ್ಟು ಒಳ್ಳೆಯ ರೀತಿಯಲ್ಲಿ ಬದುಕೋಣವೆಂದುಕೊಂಡೆವಲ್ಲವೆ ? ಇನ್ನು ಈ ಮೋಸದ ಬುದ್ಧಿ ಮಾತ್ರ ಏತಕ್ಕೆ ? ನಿಧಿ ತುಂಬಿದ ಎರಡು ಭಾಂಡಗಳು ಸಿಕ್ಕಿವೆಯಷ್ಟೆ ? ಇಬ್ಬರೂ ಒಂದೊಂದು ತೆಗೆದುಕೊಂಡು ಆ ಧನದಿಂದ ಹಾಯಾಗಿ ಬದುಕೋಣ" ಎಂದನು. "ಹೌದು. ಅದೇ ಸರಿ" ಎಂದ ಸಣ್ಣಪ್ಪ.

ಅದರಂತೆಯೇ ನಿಧಿ ಭಾಂಡಗಳನ್ನು ಸಣ್ಣಪ್ಪ, ಚಿನ್ನಪ್ಪಂದಿರು ಸರಿಸಮನಾಗಿ ಹಂಚಿಕೊಂಡು ಧನವಂತರಾಗಿ ಸುಖವಾಗಿ ಕಾಲ ಕಳೆದರು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೦ ಮಾರ್ಚಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**







Devidas Kasbekar

Anant Desai

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಜನವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★. ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

## ನವಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಬರುವುದು ಮನೆಗೆ ಬೆಳಕು**

ಎರಡನೇ ಫೋಟೋ: **ಹೋಗುವುದು ಮನದ ಕೊಳಕು**

ಕಳುಹಿಸಿದವರು: **ಶಕುಂತಲಾ,**

N. W. C. ೨೨೭/B ಗಣೇಶಕಾಲೊನಿ, ಭದ್ರಾವತಿ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.

ನಮಗೆ
ಬಬಲ್‌ಗಮ್ ಕೊಡಿ
ಇಲ್ಲದಿದ್ದರೆ...

NP 007½ BUBBLE GUM

007½

ಬಬಲ್‌ಗಮ್

AN NP PRODUCT

Imageads-NP-2p

ಭಾರತದಲ್ಲಿ ತನ್ನ ಪಾಲಿಗೆ 15 ವರ್ಷಗಳ ಯೋಗ್ಯ ಸಂಶೋಧನೆಯ ದಾಖಲೆ ಹೊಂದಿದ ಸಂಸ್ಥೆ ಮೇರಿ ಒಂದೇ. 5 ವರ್ಷದ ಭರವಸೆಯ ಮುದ್ರೆಯೊಂದಿಗೆ ಅದು 'ಮೇರಿ ಸುಪರ್ ಸ್ಪೆಶಲ್' ಚಿನ್ನದ ಒಪ್ಪ ಹಾಕಿದ ಆಭರಣಗಳನ್ನು ತಯಾರಿಸುತ್ತದೆ ಹಾಗೂ ವಿ. ಪಿ. ಪಿ. ಮೂಲಕ ಭಾರತದ ಎಲ್ಲಾ ಭಾಗಗಳಿಗೆ ಸರಬರಾಜು ಮಾಡುತ್ತದೆ. ಉಚಿತ ಕ್ಯಾಟಲಾಗಿಗೆ ಬರೆಯಿರಿ. ಪ್ರತಿನಿಧಿಗಳಿಲ್ಲದ ಪ್ರದೇಶಗಳಲ್ಲಿ ಏಜಂಟರು ಬೇಕಾಗಿದ್ದಾರೆ.

NO. 200 RS. 28.50
NO. 24 RS. 50.50
NO. 64 RS. 50.50
NO 55 RS 52 50
NO. 173 35 50 RS
NO. 152 12.50 RS
NO. 112 13.50
NO. 112 13.50 RS
NO 47 RS 29.50
NO 73 33.50 RS.
NO 75 49.50 RS
NO. 77 29.50
NO. 122 13.50 RS
NO 93 15.50 RS
NO. 126 15.50 RS
NO. 264 RS. 25.50
NO. 110 30.50 RS
NO 74 RS 25.50
NO. 84 15.50 RS
NO. 276 17.50 RS
NO 251 25.50 RS
NO. 102 18.50 RS.
NO. 103 16.50 RS
NO. 104 16.50 RS
NO. 267 15.50 RS
NO. 266 10.50 RS
NO. 279 15.50 RS
NO. 96 17.50 RS
PREMA

ESTD. 1963

## MERI GOLD COVERING WORKS

P. B. No. 1405, No. 14, Ranganathan ST., T. Nagar, Madras-600017.

**Results of Chandamama—Camlin Colouring Contest No. 11 (Kannada)**

*1st Prize:* Rajesh K. Bhat, Kumta-581 243. *2nd Prize:* S. N. Simha, Mysore-4. *3rd Prize:* Raju B. Belganvi, Hongal. *Consolation Prizes:* C. Kalpana, Mysore-570 004; K. R. Girish, Coondapoor; Kumari E. V. Bagare, Harapana Halli; Rekha D. Shetty, Bombay-83; Sharangith Kumar, Mangalore-6.

CHANDAMAMA (Kannada) JANUARY 1980 Regd. No. M. 5210

# ಚಿಕ್ಕ ಮಕ್ಕಳು
# ಪ್ರೀತಿ ಬಯಸಿವೆ, ಪ್ರೀತಿ ಪಡೆಯುತ್ತ ಮತ್ತೆ ಬೆಳೆದಿವೆ




ಪ್ರೀತಿಯ ಇನ್ನೊಂದು ಹೆಸರು

**ಪಾರ್ಲೆ ಗ್ಲುಕೋ**
**ಅಪೂರ್ವವಾದ ರುಚಿ**
**ತುಂಬಿ ತುಳುಕುವ ಶಕ್ತಿ**

ಹಾಲು, ಗೋಧಿ, ಸಕ್ಕರೆ ಮತ್ತು ಗ್ಲುಕೋಸ್‌ಗಳ
ಹಿತಕಾರೀ ಸತ್ವಗಳಿಂದ ಸಮೃದ್ಧವಾಗಿವೆ.



ವರ್ಲ್ಡ್ ಸಿಲೆಕ್ಷನ್
ಅವಾರ್ಡ್‌ನ ವಿಜಯಿ

ಪಾರ್ಲೆ
ಗ್ಲುಕೋ
ಭಾರತದ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್

everest/79/PP/159-kn